# ಆಗಸ್ಟ್ ಒಂಬತ್ತು

## ಮತ್ತು ಇತರ ಕತೆಗಳು

ಬಸವರಾಜ ಕಟ್ಟೀಮನಿ

ಪ್ರಭಾತ ಸಾಹಿತ್ಯ

ಮಲ್ಲೇಶ್ವರಂ, ಬೆಂಗಳೂರು.



ಹುತಾತ್ಮ ಶಂಕರಪ್ಪನ ವೀರಸ್ಮರಣೆಗೆ

"ಕಾಳೆಗದೊಳಳಿಯಲೇಂ ?
ಸಾವೆ ಸಿರಿ ಕಲಿಗೆ ! "

—ಕುವೆಂಪು

## ಜೈ ಹಿಂದ್ !

ಆಗಸ್ಟ್ ಕ್ರಾಂತಿಯ ಹಿನ್ನೆಲೆಯಲ್ಲಿ ಹಲವು ಕತೆಗಳನ್ನು ಬರೆದು ಒಂದು ಸಂಕಲನವನ್ನು ಪ್ರಕಟಿಸಬೇಕೆಂದು ನಾನು ಸಂಕಲ್ಪಿಸಿ ಬಹುಕಾಲ ವಾಯಿತು ಅನೇಕ ಅನನುಕೂಲತೆಗಳಿಂದಾಗಿ ಇದುವರೆಗೆ ಅದು ಕೈಗೂಡಿರಲಿಲ್ಲ.

ಈ ವರ್ಷವಾದರೂ ಇದು ಹೊರಬೀಳುವಂತೆ ಮಾಡಿದುದರ ಸಕಲ ಶ್ರೇಯಸ್ಸು ಶ್ರೀಯುತ ಕೃಷ್ಣಶರ್ಮರದು. ಅವರ ನೆರವು ಸಿಕ್ಕದೆ ಹೋಗಿದ್ದರೆ ಇನ್ನೂ ಎಂದು ಬೆಳಕು ಕಾಣುತ್ತಿತ್ತೋ ಇದು !

ಸಾಮಾನ್ಯವಾಗಿ ಇಲ್ಲಿನ ಕತೆಗಳೆಲ್ಲ ಸತ್ಯಕತೆಗಳೇ. ಆಗಸ್ಟ್ ಕ್ರಾಂತಿಯ ಪ್ರಚಂಡ ಬಿರುಗಾಳಿಗೆ ಸಿಲುಕಿ, ಆರ್ಥಿಕ ತೊಂದರೆಗಳಿಗೆ ಕಟ್ಟುಬಿದ್ದು, ಸಾಯುವ ಸ್ಥಿತಿಗೆ ಬಂದರೂ ಸೋತುಹೋಗದೆ ತನ್ನ ಉಜ್ವಲ ವ್ಯಕ್ತಿತ್ವವನ್ನು ಕಾಯ್ದುಕೊಂಡು ತಲೆಯೆತ್ತಿ ನಿಂತ ಧೀರ ಭಾರತಿಯ ಚಿತ್ರ 'ಆಗಸ್ಟ್ ಒಂಬತ್ತು ;' ಉತ್ತರ ಹಿಂದುಸ್ಥಾನದ ಒಂದು ಊರಿನಲ್ಲಿ ನಲವತ್ತೆರಡರಲ್ಲಿ ನಡೆದ ರುದ್ರ ಘಟನೆಯೊಂದರ ಚಿತ್ರ 'ರಕ್ತ-ಧ್ವಜ'; ಕಳೆದ ವರ್ಷ ಬೆಳಗಾವಿ ಜಿಲ್ಲೆಯ ಹಳ್ಳಿಯೊಂದರಲ್ಲಿ ಪ್ರಾಣಬಿಟ್ಟ ಕ್ರಾಂತಿವೀರನೊಬ್ಬನ ಕತೆ 'ಹುತಾತ್ಮ;' ಉತ್ತರ ಕರ್ನಾಟಕದ ಸೆರೆಮನೆಯೊಂದರಲ್ಲಿ ನಾನೇ ಸ್ವತಃ ಕಣ್ಣಾರ ಕಂಡ ಘಟನೆಯೊಂದರ ಚಿತ್ರ 'ಜನವರಿ ಇಪ್ಪತ್ತಾರು ;' ಇನ್ನುಳಿದವೂ ಹೀಗೇ ಸತ್ಯಕತೆಗಳೇ !

ಹೆಚ್ಚು ಕತೆಗಳು ಸಾವಿನಲ್ಲಿ ಕೊನೆಗಾಣಲು ಕಾರಣ ಬೇರೇನೂ ಅಲ್ಲ. ಆಗಸ್ಟ್ ಒಂಬತ್ತರ ಸಂದೇಶವೇ ಅದು. 'ಮಾಡು, ಇಲ್ಲವೆ ಮಡಿ' ! ಎಂದರು ಗಾಂಧೀಜೀ. ನಮ್ಮ ವೀರಜನ ನಿಜಕ್ಕೂ 'ಮಾಡಿದರು ; ಮಡಿದರು !' ತಮ್ಮ ಎದೆಯ ರಕ್ತದಿಂದ ನಮ್ಮ ಬಾವುಟಕ್ಕೆ ಬಣ್ಣ ಬಳಿದರು.

ಮಾಡಿ ಮಡಿದ ಇಂಥ ಹುತಾತ್ಮರ ಕತೆಗಳು ಇವು.

ಈ ಸಂಕಲನ ಪ್ರಕಟವಾಗಲು ನೆರವಾದ ಶ್ರೀ ಶರ್ಮಾಜಿಯವರಿಗೂ, ಮುದ್ದಾಗಿ ಮುದ್ರಿಸಿಕೊಟ್ಟ ಗೆ. ರಾಮಕೃಷ್ಣ ಮತ್ತು ಗೆ. ಮುನಿರಾಮಯ್ಯನವರಿಗೂ, ರಕ್ಷಾಪತ್ರಕ್ಕೆ ಅಂದವಾದ ಚಿತ್ರ ಬರೆದುಕೊಟ್ಟಿರುವ ಶ್ರೀ ಪುರುಷೋತ್ತಮರಾಯರಿಗೂ ನಾನು ಋಣಿ.

**ಬಸವರಾಜ ಕಟ್ಟೀಮನಿ**

## ಈ ಲೇಖಕರ ಇತರ ಕೃತಿಗಳು

ಕಾರವಾನ್ [ಕತೆಗಳು]
ಗುಲಾಬಿ ಹೂ ,,
ಜೀವನ-ಕಲೆ ,,
ಸ್ವಾತಂತ್ರ್ಯದೆಡೆಗೆ [ಕಾದಂಬರಿ]

## ಅಚ್ಚಿನಲ್ಲಿ

ಸ್ವಾತಂತ್ರ್ಯಸಮರ [ಕಾದಂಬರಿ]
ಜೊತೆಗಾತಿ ,,

# ಆಗಸ್ಟ್ ಒಂಬತ್ತು !

"ಮಾಡು ! ಇಲ್ಲವೆ ಮಡಿ !"

—ಮಹಾತ್ಮಾ ಗಾಂಧಿ

# ಆಗಸ್ಟ್ ಒಂಬತ್ತು !

"ಚಿಟಿ-ಚಿಟಿಲ್" ಎಂದು ಸಿಡಿಯುವ ತಲೆ; ಉರಿಯುವ ಕಣ್ಣು; ಬಿಸಿಬಿಸಿ ಉಸಿರು; ಮಳೆಗಾಲದ ರಾತ್ರಿಯಾದರೂ ಸಹಿಸಲಾಗದಂಥ ಧಕೆ! ಅತ್ತ ಇತ್ತ ಹೊರಳಿ ಹೊರಳಿ ಮೈಯ ಕಾವೂ ಬಲವಾಗಿತ್ತು. ನಿದ್ರೆಯ ಬರದೆ ಹೋದರೆ ಮಾಡುವುದಾದರೂ ಏನನ್ನು? ಹೊರಳಿದ್ದೇ ಹೊರಳಿದ್ದು ಹಾಗೇ-ಆ ಪಕ್ಕದಿಂದ ಈ ಪಕ್ಕ!—ಈ ಪಕ್ಕದಿಂದ ಆ ಪಕ್ಕ! ಶರೀರವೆಲ್ಲೆಲ್ಲ ಒಂದು ಬಗೆಯ ವಿಲಕ್ಷಣ ನೋವು. ಎದೆಯಲ್ಲೋ ವಿಚಾರ ಗಳ ತಾಕಲಾಟ!—ರಾತ್ರಿ ಒಂಬತ್ತು ಗಂಟೆಯಿಂದ ಬೆಳಗಿನ ಜಾವದ ನಾಲ್ಕು ಗಂಟೆ!—ಎವೆಗೆ ಎವೆ ಹತ್ತಿರಲಿಲ್ಲ....ಕಣ್ಣು ಪರದೆ ಮುಚ್ಚಿರಲಿಲ್ಲ....

ಹೊದೆದುಕೊಂಡ ಹರಕು ಸೀರೆಯನ್ನಾಚೆ ಸರಿಸಿ ಎದ್ದು ಕುಳಿತಳು ಜಯಾ! ಹೊರಳಿ ಹೊರಳಿ ಅಸ್ತವ್ಯಸ್ತವಾಗಿತ್ತು ಉಟ್ಟಸೀರೆ. ತಲೆತುಂಬಾ ಹೊದೆದುಕೊಳ್ಳಬೇಕೆಂದು ಸೆರಗು ಎತ್ತಿದಳು. ಒಡನೆಯೆ "ಟರ್ರ್" ಎಂಬ ಸದ್ದು. ಯಾವುದೋ ಛಿದ್ರವೊಂದಕ್ಕೆ ಬೆರಳು ಸಿಕ್ಕಿಬಿದ್ದು ಸೆರಗೆಲ್ಲ ಹರಿದು ಹೋಯಿತು. ಬ್ಲೌಜಿನ ಗುಂಡಿ ಬಿಚ್ಚಿಹೋಗಿತ್ತು. ಅದನ್ನು ಹಾಕಲು ಕೈ ಸೇರಿಸಿದಳು. ಎರಡು ವರ್ಷಗಳ ಕಾಲ ಸೇವೆಸಲ್ಲಿಸಿ ಬಡವಾಗಿದ್ದ ಆ ಗುಂಡಿಯೂ ಕಳಚಿ ಬಿದ್ದಿತು.

ಮೂಗಿನ ಮೇಲೆ ಬಂದಿದ್ದ ಮುಂಗುರುಳುಗಳನ್ನೆತ್ತಿ ಹಿಂದೆ ಹಾಕಿ ಕಿಟಕಿಯಾಚೆ ದೃಷ್ಟಿ ತೂರಿದಳು. ಎಂಥ ಕತ್ತಲು ರಾತ್ರಿ ಅದು!— ನೀರವ....ನಿಶ್ಶಬ್ದ....! ಸೊಟ್ಟಗೆ ಮುಖ ಮಾಡಿಕೊಂಡು ಮೌನವಾಗಿ ಮಿನುಗುತ್ತಿದ್ದ ತಾರೆಗಳು........ಔದಾಸೀನ್ಯದ ಅವತಾರದಂತಿದ್ದ ಆ ಆಕಾಶದ ಬಯಲು! ನಿತ್ಯವೂ ರಭಸದಿಂದ ಬೀಸಿ ಬರುವ ಗಾಳಿಯ ಸುಳಿವೂ ಇರಲಿಲ್ಲ ಅಂದು! ಎದ್ದು ನಿಂತ ಶವಗಳಂತೆ ಗಾಢ ಮೌನ ತಳೆದಿದ್ದ ಗಿಡಗಳು.... ಚಲಿಸದಿದ್ದ ಎಲೆಗಳು....ಈ ನಿಸರ್ಗ—ತನ್ನ ಬಾಳು!....ಆ ಹೋಲಿಕೆಯನ್ನು ಗಮನಿಸಿದಾಗ ಅವಳ ದೃಷ್ಟಿ ತಾನಾಗಿಯೇ ಹೊರಳಿ ಬಿಟ್ಟಿತು.

ಗೋಡೆಗೊರಗಿ ಕುಳಿತುಕೊಂಡು ಕಣ್ಣುಗಳೆರಡನ್ನೂ ಬಲವಾಗಿ ಉಜ್ಜಿಕೊಂಡಳು. ಆ ಉರಿ! ಆ ನೋವು!—ಎರಡು ವರ್ಷಗಳಿಂದ

ಎಣ್ಣೆ ನೀರು ಕಾಣದೆ ಛಲ ಹಿಡಿದ ಹಾಗಿತ್ತು ತಲೆ ! ಎಣ್ಣೆ ನೀರಂತೆ ಎಣ್ಣೆ ನೀರು ! ನೀರು ಸಿಕ್ಕುವುದೂ ಕಷ್ಟವಾಗಿರುವಾಗ ಎಲ್ಲಿಯ ಎಣ್ಣೆ ! ಏನು ಕಥೆ ! ತನ್ನ ಮಾತು ಹಾಗಿರಲಿ. ಆ ಚಂದ್ರ ಯಾವ ಪಾಪ ಮಾಡಿ ದಾನೊ ! ಅವನಿಗೂ ಒಂದುಬಾರಿ ಕೂಡ ಎಣ್ಣೆಸ್ನಾನ ಸಿಕ್ಕಲಿಲ್ಲ !—ಬಟ್ಟೆ ಗಳೂ ಹರಿದು ಹೋದುವು. ಅವರಿದ್ದಾಗ ಹೊಲಿಸಿದ ಶರ್ಟು ಚಣ್ಣ ಎಲ್ಲವೂ ಚಿಂದಿ ಚಿಂದಿಯಾದವು. ತನ್ನ ಸೀರೆಗಳೂ ಚೂರುಚೂರಾದವು ತನ್ನ ಸಂಪಾದನೆ ಹೊಟ್ಟೆಗೂ ಸಾಲದು ! ಬಟ್ಟೆಗೋ ವಿಪರೀತ ಬೆಲೆ. ಉಳಿದಿರುವ 'ಎರಡು ಸೀರೆಗಳಲ್ಲೆ ಸಾಗಿಸಬೇಕಾಗಿದೆ....ಹೊಲಿದುಕೊಂಡು ....ಹಚ್ಚಿಕೊಂಡು....ಆಗಸ್ಟ್ ೪೨ ರಿಂದ ಆಗಸ್ಟ್ ೪೫....ಎಂಥ ಕಷ್ಟ ಇದು ಈ ಮೂರು ವರ್ಷ !....

'—ಮೂರು ವರ್ಷ ? ನಿಜಕ್ಕೂ ಮೂರೇ ಮೂರು ವರ್ಷವೆ ? ಈ ವಿರಹ ವೇದನೆ, ಈ ಯಾತನೆ, ಈ ಗೋಳು, ಈ ಕಣ್ಣೀರ ಮಳೆ, ಈ ಉಪವಾಸ, ಈ ವನವಾಸ—ಮೂರು ವರ್ಷವೋ ? ನೂರು ವರ್ಷವೊ ?—ಆಗಸ್ಟ್ ೧೯೪೨—ಹೇಗಿತ್ತು ಆಗ ತನ್ನ ಸಂಸಾರ ?—ಆಗಸ್ಟ್ ೧೯೪೫—ಹೇಗಾಗಿದೆ ಈಗ ಅದರಸ್ಥಿತಿ !—ಈ ಮೂರು ವರ್ಷಗಳಲ್ಲಿ ಏನೆಲ್ಲ ಪರಿವರ್ತನೆ ಯಾಯಿತು ! ಬಿದ್ದ ರಾಷ್ಟ್ರಗಳು ಮತ್ತೆ ಎದ್ದವು. ಸ್ವತಂತ್ರವಾಯಿತು. ಫ್ರಾನ್ಸ್. ವಿಜಯಿಯಾಯಿತು ರಷ್ಯಾ. ಹಿಟ್ಲರ್ ಮಣ್ಣು ಮುಕ್ಕಿದ. ಮುಸೋಲಿನಿ ಸತ್ತುಹೋದ. ಯೂರೋಪಿನಲ್ಲೆಲ್ಲ ವಿಜಯಶ್ರೀಯ ಸಂತಸ ನೃತ್ಯ !....

ಸಮರಾಂಗಣಕ್ಕೆ ಹೋಗಿದ್ದ ಸೈನಿಕರು ಮನೆಗೆ ಮರಳಿದಾಗಿನ ದೃಶ್ಯ ಅವಳ ಕಲ್ಪನಾದೃಷ್ಟಿಯೆದುರು ಮೂಡಿತು. ನಾಲ್ಕೈದು ವರ್ಷಗಳ ದೀರ್ಘ ಹೋರಾಟದ ನಂತರ—ವೇದನಾಪೂರ್ಣ ವಿರಹದ ನಂತರ ಮನೆಗೆ ಬಂದಿದಾನೆ ಸೈನಿಕ. ಅದುವರೆಗೂ ಜೀವನ ದಾರಿ ಕಾಯುತ್ತ, ದೃಷ್ಟಿಯಲ್ಲೆ ಪ್ರಾಣ ಇಟ್ಟುಕೊಂಡು ಅವನ ಬರವನ್ನೇ ನಿರೀಕ್ಷಿಸುತ್ತಿದ್ದ ನಲ್ಲೆ....ಎಷ್ಟು ಮಧುರವಾಗಿದ್ದೀತೋ ಆ ಪುನರ್ಮಿಲನ ! ಆ ಮಾಧುರಿಗೆ ಸಕ್ಕರೆ ಬೆರ ಸಿದ ಹಾಗೆ ವಿಜಯದ ಮಾದಕತೆ ಬೇರೆ—ಯೂರೋಪ್—ಅಮೆರಿಕಾ—ಮತ್ತು ಹಿಂದುಸ್ಥಾನ !—ಅಲ್ಲಿಗೂ ಇಲ್ಲಿಗೂ ಅದೆಷ್ಟು ಅಂತರ !—ಎಂಥ

ಪ್ರತ್ಯಾಸ !—ಜಯ ದೊರೆಯಿತು ಅವರಿಗೆಲ್ಲ !—ಅವರ ಸೈನಿಕರೂ ಮನೆಗೆ ತೆರಳಿದರು !—ನಮಗೆ ಮಾತ್ರ ಇನ್ನೂ ಗುಲಾಮಗಿರಿಯೆ ! ನಮ್ಮ ಸ್ವಾತಂತ್ರ್ಯದ ಸೈನಿಕರಿಗೆ ಇನ್ನೂ ಸೆರೆಮನೆಯೇ —

ಹದಿನೈದು ದಿನಗಳ ಹಿಂದೆ ಪತಿಯನ್ನು ಕಾಣಲು ಹೋದಾಗ ತನ್ನ ಮನಸ್ಸಿನಲ್ಲಿ ಸುಳಿದಿದ್ದ ವಿಚಾರವೊಂದು ಮತ್ತೆ ತಲೆಯೆತ್ತಿ ಬಂತು. ಕಾರಾಗಾರದ ಆ ಭೀಕರ ಮಹಾದ್ವಾರವನ್ನು ಕಂಡಾಗ ಭಾರತವನ್ನು ಸುತ್ತುವರೆದ ಬ್ರಿಟಿಷ್ ಸಾಮ್ರಾಜ್ಯಶಾಹಿಯ ಕರಾಳ ಸ್ವರೂಪ ಮೂರ್ತಿವೆತ್ತು ಬಂದಹಾಗೆ ಭಾಸವಾಗಿತ್ತು ಅವಳಿಗೆ. ಆ ಬಾಗಿಲಿನ ಪುಟ್ಟ ಕಿಂಡಿಯಲ್ಲಿ ತಲೆ ಬಾಗಿಸಿ ಒಳ ಸೇರುವಾಗ ಪರಕೀಯ ಸರ್ಕಾರದ ದಬ್ಬಾಳಿಕೆಯೆದುರಿಗೆ ನಿತ್ಯವೂ ತಲೆಬಾಗಬೇಕಾದ ಭಾರತದ ದೃಶ್ಯ ಕಣ್ಣೆದುರು ಬಂದಿತ್ತು ! ಎಂದು ತಪ್ಪೀತೋ ಈ ತಲೆಬಾಗುವ ಶಿಕ್ಷೆ ! ಎಂದು ಮುರಿದು ಬಿದ್ದೀತೋ ಈ ದಾಸ್ಯದ ಬಾಗಿಲು ! ಎಂದುಕೊಂಡಾಗ ಅವಳ ಎದೆಯಲ್ಲಿ ಪ್ರಚಂಡ ಬೆಂಕಿ ಧಗಧಗಿಸಿದ ಹಾಗಾಗುತ್ತಿತ್ತು. ಮಿತ್ರರಿಗೇನೋ ಜಯ ದೊರೆಯಿತು. ಆದರೆ ನಮಗಿನ್ನೂ ಜಯ ದೊರೆಯಲಿಲ್ಲ........ಕಾರಾಗಾರ ತಪ್ಪಲಿಲ್ಲ........ಆ ಕರಾಳ ಬಾಗಿಲು ತೆರೆಯಲಿಲ್ಲ—ಸ್ವಾತಂತ್ರ್ಯದ ಸೈನಿಕರು ಮರಳಲಿಲ್ಲ—

'ಥೂ' ಎಂದಳು ಜಯಾ. "—ವಿಜಯವಂತೆ ! ಯಾರ ವಿಜಯ? ನಾವು ನಲವತ್ತು ಕೋಟಿ ಜನ ಗುಲಾಮಗಿರಿಯಲ್ಲಿರುವವರಿಗೆ ನಮಗೆ ಎಲ್ಲಿಯ ವಿಜಯ ! ಏನು ಕತೆ ! ಎಂದು ಹೋದೀತೋ ಈ ದಬ್ಬಾಳಿಕೆ! — ಎಂದು ಬಂದೀತೋ ನಮ್ಮ ಸ್ವಾತಂತ್ರ್ಯ! — ಎಂದು ಹಿಂದಿರುಗಿ ಬಂದಾನೋ ನನ್ನ ನಾಥ ? ನನ್ನ ವಿಶ್ವನಾಥ ?...."

ಪಕ್ಕದಲ್ಲಿ ನಿದ್ರೆಹೋಗಿದ್ದ ಚಂದ್ರಶೇಖರ ಕನವರಿಸುತ್ತಿದ್ದ :

"ವಂದೇ ಮಾತರಮ್s "
ವಂದೇss ವಂದೇss
ವಂದೇ ಮಾತರಮ್sss "

ಬಾಡಿದ ಬೆಳೆಗೆ ಅಮೃತದ ಮಳೆ ಬಿದ್ದಂತಾಯಿತು. ಮೆಲ್ಲ ಮೆಲ್ಲನೆ ಅವಳ ಎದೆಯಲ್ಲಿ ಸೇರಲು ಯತ್ನಿಸುತ್ತಿದ್ದ ನಿರಾಶೆಯ ಹಾವು ಹೆದರಿ ಓಡಿ

ಹೋಯಿತು. ಅಭಿಮಾನ ಬೆರೆತ ಅಕ್ಕರೆಯಿಂದ ಮಗನ ಎದೆಯ ಮೇಲೆ ಮೆಲ್ಲನೆ ಕೈಯಾಡಿಸಿದಳು. ಅವನು ಕನವರಿಸುತ್ತಲೇ ಇದ್ದ.

“ ಮಾತರಮ್

ವಂದೇ ಮಾತರಮ್ ! ”

ಕೊಂಚ ಹೊತ್ತು ಕೈ ಹಾಗೆಯೇ ಇರಿಸಿದ್ದಳು ಮಗನ ಎದೆಯ ಮೇಲೆ. ಬೆರಳುಗಳಿಗೆ ಹತ್ತಿಕೊಳ್ಳುತ್ತಿದ್ದ ಆ ಮೂಳೆ ಮೂಳೆ !— ಪತಿಯಿದ್ದಾಗ ರಕ್ತ ಮಾಂಸ ತುಂಬಿಕೊಂಡು ನುಣುಪಾಗಿದ್ದ ಆ ಎದೆ—ಇಂದು ಮೂಳೆ ಮೂಳೆ !— ಅವುಗಳ ಒಂದೊಂದು ಸ್ಪರ್ಶವೂ ಅವಳೆದೆಯಲ್ಲಿ ವೇದನೆಯ ಕಾರಂಜಿಯನ್ನು ಪುಟಿಸತೊಡಗಿತು. ತಂದೆಯ ಕಣ್ಣಬೊಂಬೆಯಾಗಿ ಸುಖದಲ್ಲಿ ಬೆಳೆದ ಮಗುವಿಗೆ ಇಂದು ಎಂಥ ಸ್ಥಿತಿ— ಭಿಕಾರಿಯಂಥದು ! ರಕ್ತವಾದರೂ ಎಲ್ಲಿಂದ ಬಂದೀತು ಒಳ್ಳೆಯ ಆಹಾರವೇ ಸಿಕ್ಕದಿದ್ದರೆ ?— ಎರಡು ಹೊತ್ತು ರೊಟ್ಟಿ ಸಿಕ್ಕುವುದೂ ಕಷ್ಟವಾಗಿರುವಾಗ — ಹಾಲು ? ಮೊಸರು ? ಬೆಣ್ಣೆ ? ತುಪ್ಪ ? — ಸಾಕಷ್ಟು ತರಕಾರಿ ಸಹ ಸಿಕ್ಕುವಂತಿಲ್ಲ — ಬೆಳೆದುದೆಲ್ಲ ಸಮರ ದೈತ್ಯನ ದವಡೆಗೇ ! ಬೆಳೆವವರಾದ ನಮಗೇ ಬರಿಗೈ ! ಬರಿ ಹೊಟ್ಟೆ ! — ನನ್ನ ಮಗು....ನನ್ನ ಚಂದ್ರ. .. ಇಂಥ ಎಷ್ಟು ಲಕ್ಷ ಚಂದ್ರರಿರಬಹುದೋ ಈ ಭಾರತದಲ್ಲಿ ?—

ಉದ್ವೇಗದಿಂದ ಮಗನನ್ನೆತ್ತಿ ಬಿಗಿಯಾಗಿ ಎದೆಗಪ್ಪಿಕೊಂಡಳು ಜಮುನಾ. ಅವನು ನಿದ್ರೆ ಹೋಗಿರುವುದರ ಜ್ಞಾನವೂ ಉಳಿಯಲಿಲ್ಲ ಅವಳಿಗೆ. ಅವನ ತಲೆಗೂದಲನ್ನು ಮಮತೆಯಿಂದ ನೇವರಿಸುತ್ತ ಮುಖಕ್ಕೆಲ್ಲಾ ಪಟಪಟನೆ ಮುತ್ತುಕೊಟ್ಟಳು. “ ನನ್ನ ಚಂದ್ರಾ, ನನ್ನ ಕಂದಾ, ನನ್ನ ಮುದ್ದೇ ! ”....

## [೨]

ಬೆಳಗು ಬರುತ್ತಲಿತ್ತು. ಮೆಲ್ಲ ಮೆಲ್ಲನೆ ಬೆಳಗು ಬರುತ್ತಲಿತ್ತು !

— ಆದರೂ ಅವಳ ವಿಚಾರಧಾರೆ ಇನ್ನೂ ನಿಂತಿರಲಿಲ್ಲ. ತಲೆ ಹಾಗೇ ಸಿಡಿಯುತ್ತಿತ್ತು. ಬೆನ್ನುಮೂಳೆ ನೋವಿನಿಂದ ಹೊಡೆದುಕೊಳ್ಳುತ್ತಿತ್ತು. ಕೈ ಕಾಲುಗಳಲ್ಲಿ ರಕ್ತದ ಪ್ರವಾಹವೇ ನಿಂತ ಹಾಗೆ ತೋರುತ್ತಿತ್ತು.

ದೀರ್ಘವಾಗಿ ಆಕಳಿಸುತ್ತ ತುಂಬ ಪ್ರಯಾಸದಿಂದ ಎದ್ದು ಕುಳಿತು ಕೊಂಡಳು ಜಯಾ.

ಎದುರಿಗಿನ ಗೋಡೆಯ ಮೇಲಿದ್ದ ವಿಶ್ವನಾಥನ ಪಟ ಬೆಳಗಿನ ಕೋಮಲ ಕಿರಣಗಳ ಸ್ಪರ್ಶದಿಂದ ಮಧುರ ನಗು ಬೀರುತ್ತಿದ್ದ ಹಾಗೆ ತೋರಿತು. ಆಹಾ! ಅದೆಷ್ಟು ಮೋಹಕ ಆ ನಗು ! ತೆರೆದ ಕಂಗಳಿಂದ ಪತಿಯ ಭಾವ ಚಿತ್ರವನ್ನು ನೆಟ್ಟ ನೋಟದಿಂದ ನಿರೀಕ್ಷಿಸತೊಡಗಿದಳು. ಆ ತಾರುಣ್ಯದ ತೇಜಸ್ಸು ! — ದೇಶ ಪ್ರೀತಿಯ ಹೊಳಪು ! — ಸ್ವಾತಂತ್ರ್ಯ ಸಮರದಲ್ಲಿ ಎಂಥ ಬಲಿದಾನಕ್ಕೂ ಸಿದ್ಧನಾಗುವ ನಿರ್ಧಾರೀ ವೃತ್ತಿಯನ್ನು ಸೂಚಿಸುವ ತುಟಿ ! — ದೇಶ ಬಾಂಧವರ ಬಗ್ಗೆ — ದೀನದಲಿತರ ಬಗ್ಗೆ ಎದೆಯಲ್ಲಿದ್ದ ತಳಮಳವನ್ನೆಲ್ಲ ಹೊರಚೆಲ್ಲುವಂತಿದ್ದ ದೃಷ್ಟಿ ! — ಆ ದೃಷ್ಟಿಯೊಂದಿಗೆ ತನ್ನ ದೃಷ್ಟಿ ಬೆರೆಯುತ್ತಲೂ ಅರ್ಥ ವ್ಯಥೆಯೋ ಅರಿಯದಂತಾಯಿತು ಜಯಾಗೆ. ಗಂಡನ ಬಗ್ಗೆ ಹೃದಯದಲ್ಲಿ ತುಂಬಿದ್ದ ಪ್ರೀತಿ — ಅಭಿಮಾನವೆಲ್ಲ ಉಕ್ಕಿ ಬಂತು. ಅವಳಿಗರಿವಾಗದಂತೆಯೇ ಕಣ್ಣುಗಳಲ್ಲಿ ಕಂಬನಿ ಚಿಮ್ಮಿ ಬಂತು. ನಾಥ ! — ತನ್ನ ಪ್ರಾಣಪ್ರಿಯ ನಾಥ ! — ಅವಳ ಹೃದಯವೇ ದೃಷ್ಟಿ ಯಲ್ಲಿ ತುಂಬಿ ಬಂದು ಪ್ರಿಯನ ಸುರಕ್ಷಿತತೆಗಾಗಿ ಮೂಕ ಪ್ರಾರ್ಥನೆ ಮಾಡಿತು.

ಚಿತ್ರವನ್ನು ದೃಷ್ಟಿಸುತ್ತಿದ್ದ ಹಾಗೆ ಅದು ಮೂಕ ಚಿತ್ರ ಎಂಬುದರ ಅರಿವೇ ಉಳಿಯಲಿಲ್ಲ ಅವಳಿಗೆ. ಎಲ್ಲೂ ಹೋಗಿಲ್ಲ ತನ್ನ ಪ್ರಿಯ. ಇಲ್ಲೇ ಇದಾನೆ — ತನ್ನೆದುರಿನಲ್ಲೇ ! ಕಣ್ಣಲ್ಲಿ ಕಣ್ಣಿರಿಸಿ, ಎದೆಯಲ್ಲಿ ಎದೆ ಸೇರಿ ಸುತ್ತಿದ್ದಾನೆ ! — ಸರ್ಕಾರದ ಅತಿಥಿ ಗೃಹದಲ್ಲಿ ಆತ ಶೃಂಖಲಾಬದ್ಧನಾಗಿರು ವುದು ಶುದ್ಧ ಸುಳ್ಳು ! — ಆಗಸ್ಟ್ ೯೨೨ರಲ್ಲಿ ಆತ ಜೈಲಿಗೆ ಹೋದದ್ದು ಬರೀ ಕನಸು ! ತನ್ನ ಹೃದಯಮಂದಿರದಿಂದ ಯಾವ ಸರ್ಕಾರ ಸೆಳೆದೊಯ್ದೀತು ತನ್ನ ನಲ್ಲನನ್ನು ! — ಇಲ್ಲೇ ಇದಾನೆ ಆತ ! ಈ ಸಿಂಹಾಸನಕ್ಕೆ ಆತನೇ ರಾಜ ! ತಾನು ಅವನ ರಾಣಿ ! ಎಂಥ ಸುಂದರ ಜತೆ ತಮ್ಮದು ! — ಉಷಾ-ಅನಿರುದ್ಧರ ಹಾಗೆ ! — ಹೌದು. ನಿಜಕ್ಕೂ ! ಅಲ್ಲದಿನ್ನೇನು ? — ಮದುವೆಗೆ ಮೊದಲು ಎಷ್ಟು ಬಾರಿ ತಾನವರ ಕನಸು ಕಂಡಿರಲಿಲ್ಲ ! — ಕನಸಿನ ಆ ಕಿನ್ನರ ಪ್ರಪಂಚ ! — ಎಷ್ಟು ಮೋಹಕವಾಗಿತ್ತು ಅದು ! —

ಅಲ್ಲಿ ಸದಾ ಹೂವಿನ ರಾಶಿ— ಹೂವಿನ ಮಂಟಪ— ಹೂಹಾರ— ಹೂಮಳೆ....

ಆ ಸುಖಮಯ ದಿನಗಳ ನೆನಪು ಬಂದ ಹಾಗೆ ಮತ್ತೆ ಅವಳ ಎದೆ ಭಾರವಾಯಿತು. ಚಿತ್ರವನ್ನು ನೋಡಲಾಗಲಿಲ್ಲ. ತುಂಬಿದ್ದ ಕಣ್ಣುಗಳನ್ನು ಮಗನ ಕಡೆ ಹೊರಳಿಸಿದಳು. ಹರಕು ಬಟ್ಟೆಯೊಂದನ್ನು ತಲೆತುಂಬ ಹೊದೆದುಕೊಂಡು ಮೊಳಕಾಲುಗಳನ್ನು ಹೊಟ್ಟೆಯುಬಳಿ ಮಡಿಚಿ ನಿದ್ರಿಸು ತ್ತಿದ್ದ ಚಂದ್ರ !

—ಮಗು ಏಳುವ ಸಮಯವಾಯಿತು. ಅಷ್ಟರೊಳಗಾಗಿ ರೊಟ್ಟಿ ಬೇಯಿಸಬೇಕು. ಅನ್ನವಂತೂ ಸಿಕ್ಕುವಂತಿಲ್ಲ ಇಂದು. ಅಕ್ಕಿಯೆಲ್ಲ ಮೊನ್ನೆಯೇ ಮುಗಿದುಹೋಯಿತು. ಜೋಳದ ಹಿಟ್ಟೂ ಸ್ವಲ್ಪವೇ ಉಳಿದಿದೆ. ಇಂದು ನಾಲ್ಕು ರೊಟ್ಟಿಗಾದರೂ ಸಾಲುತ್ತದೋ ಇಲ್ಲವೋ !— ನಂಜಿಕೊ ಳ್ಳಲು ಪಲ್ಯಕ್ಕೂ ಗತಿಯಿಲ್ಲ. ತರಕಾರಿ ಕೊಳ್ಳಲು ಚಿಕ್ಕಾಸೂ ಇಲ್ಲ ಹತ್ತಿರ. ಈರುಳ್ಳಿಯಾದರೂ ಇದ್ದಿದ್ದರೆ ! ಅದೂ ತೀರಿ ಹೋಯಿತು ನಿನ್ನೆಗೇ. ಉಪ್ಪಿನಕಾಯಿಗೂ ಗತಿ ಇಲ್ಲವಲ್ಲ !—ಮೆಣಸಿನಕಾಯಿ ಸಹ ಸಿಕ್ಕುವಂತಿಲ್ಲ ಸುಲಭವಾಗಿ ! ಖಾರವನ್ನಾದರೂ ತಿನ್ನೋಣ ಅಂದರೆ. ಅದೂ ಅಷ್ಟೆ ಉಳಿದಿದೆ. ಒಂದು ಚಮಚ-ಎರಡು ಚಮಚ ! ಎಂಥ ದಾರಿದ್ರ್ಯ ಬಂತು ತನಗೆ !—ಮೈಮೇಲಿದ್ದ ಚಿಕ್ಕಪುಟ್ಟ ಒಡವೆಗಳನ್ನೆಲ್ಲ ಮಾರಿ ಬಿಟ್ಟುದಾಯಿತು. ಮದುವೆಯಲ್ಲಿ ಬಂದಿದ್ದ ರೇಷ್ಮೆ ಸೀರೆ—ಅದೂ ಹೋಯಿತು ಇಪ್ಪತ್ತು ರೂಪಾಯಿಗೆ ! ಎಲ್ಲಾ ಹೊಟ್ಟೆಗೆ ಸೇರಿ ಸುಟ್ಟು ಹೋಯಿತು. ಈಗ ಕೈಲಿ ಬಿಡಿ ಕಾಸೂ ಇಲ್ಲ. ಕಳೆದ ತಿಂಗಳ ಸಂಬಳ ಇನ್ನೂ ಸಿಕ್ಕಲಿಲ್ಲ. ಎಂದು ಸಿಕ್ಕುತ್ತೋ ಯಾರು ಬಲ್ಲರು ? ಅದು ಕೈಗೆ ಬರುವವರೆಗೂ....?

"? ? ? ?"

ಸೌದೆಯ ತುಂಡುಗಳನ್ನು ಒಲೆಗೆ ಸೇರಿಸುತ್ತಿದ್ದ ಹಾಗೆ ಒಂದೇ ವಿಚಾರ ಅವಳ ತಲೆಯಲ್ಲಿ ಚಕ್ರಾಕಾರವಾಗಿ ಸುತ್ತುತ್ತಿತ್ತು.

"ಸಂಬಳ ಬರುವವರೆಗೆ ನಮ್ಮ ಗತಿಯೇನು ? ಯಾರ ಹತ್ತಿರ ಕೇಳೋಣ ಸಾಲ ? ಕೊಡುವವರಾದರೂ ಯಾರು ?"

ಒಲೆಯಿಂದ ಮೆಲ್ಲಮೆಲ್ಲನೆ ಮೇಲಕ್ಕೇರುತ್ತಿದ್ದ ಹೊಗೆಯ ಸುರುಳಿಗಳ ಮಧ್ಯೆ ಮದ್ದೂರಾಯರ ಮೂರ್ತಿ ಬಂದು ನಿಂತಂತಾಯಿತು. "ಯಾಕೆ ಯೋಚಿಸ್ತೀಯಾ ಜಯಾ ! ಹಣ ಬೇಕಲ್ಲವೆ ನಿನಗೆ ? ಎಷ್ಟು ಬೇಕು ಹೇಳು. ನಾನು ಕೊಡುತ್ತೇನೆ" ಎಂದಂತಾಯಿತು.

ಕಲ್ಪನೆ ಹುಟ್ಟಿಸಿದ ಆ ಮಾತನ್ನೂ ಸಹ ಕೇಳಲಾಗಲಿಲ್ಲ ಅವಳಿಗೆ. ರಭಸದಿಂದ ಒಲೆ ಊದುತ್ತ ಮನಸ್ಸಿನಲ್ಲೆ ಕಿರುಚಿಕೊಂಡಳು.

"ಬೇಡ. ಬೇಡ ನನಗೆ ನಿಮ್ಮ ದುಡ್ಡು. ನಾನೂ ನನ್ನ ಮಗೂ ಉಪವಾಸ ಸತ್ತರೂ ಚಿಂತೆಯಿಲ್ಲ. ನಿಮ್ಮನ್ನು ದುಡ್ಡಿಗಾಗಿ ಯಾಚಿಸ ಲಾರೆ ನಾನು !"

[೩]

ಅಂದಿನ ಕೊನೆಯ ಪಾಠ ಮುಗಿಸಿ ಅವಳು ತರಗತಿಯಿಂದ ಹೊರ ಡುತ್ತಿದ್ದ ಹಾಗೆ ಶಾಲೆಯ ಜವಾನ ಬಂದು ಹೇಳಿದ.

"ಹೆಡ್‌ಮಾಸ್ತರು ಬರಹೇಳಿದಾರೆ ನಿಮಗೆ."

ಅವಳ ಎದೆ ಧಡಧಡಿಸತೊಡಗಿತು—ಬರಲಿರುವ ಬಿರುಗಾಳಿಯನ್ನು ನೆನೆದು. ತಲೆ ಗಿರ್ರೆಂದು ಸುತ್ತತೊಡಗಿತು. ಕೈಲಿದ್ದ ಪುಸ್ತಕ ಕೆಳಕ್ಕೆ ಬೀಳುವ ಹಾಗಾಯಿತು. ತುಂಬ ಕಷ್ಟದಿಂದ ಆವೇಗವನ್ನು ತಡೆದು ಕೊಂಡು ಅವರ ಕೊಟಡಿಯನ್ನು ಪ್ರವೇಶಿಸಿದಳು.

ಕನ್ನಡಕವನ್ನು ಕೈಲಿ ಹಿಡಿದು, ವಸ್ತ್ರದಿಂದ ಅದನ್ನೊರೆಸುತ್ತ ಕುರ್ಚಿ ಯಲ್ಲಿ ಆತು ಕುಳಿತಿದ್ದರು ಮದ್ದೂರಾಯರು. ಕಾಲಿಗಿದ್ದ ಚಿತ್ತಾರದ ಚಪ್ಪಲಿ ಮೇಜಿನ ಅಡಿಯೊಂದಿಗೆ ಚಿನ್ನಾಟವಾಡುತ್ತಿತ್ತು. ತುಟಿಗಳಲ್ಲಿ ಗೆಲವಿನ ನಗೆ. ಹರಿಣಿಗೆ ಗುರಿಯಿಟ್ಟು ನಿಂತ ಬೇಟೆಗಾರನ ದರ್ಪ ದೃಷ್ಟಿಯಲ್ಲಿ.

"ಕೂತುಕೊಳ್ಳಿ. ಕೂತುಕೊಳ್ಳಿ" ಎಂದರು ಅರ್ಥಗರ್ಭಿತ ನಗು ಬೀರುತ್ತ.

ಕೂತುಕೊಳ್ಳಲಿಲ್ಲ ಜಯಾ.

ಅವರೆದುರಿಗೆ ಕುರ್ಚಿಯಲ್ಲಿ ಕೂತುಕೊಳ್ಳುವುದು ಹೊಸದೇನೂ ಆಗಿರ ಲಿಲ್ಲ ಆಕೆಗೆ. ನಿಜ. ಹಿಂದೆ ಎಷ್ಟೋ ಬಾರಿ ಅಲ್ಲಿ ಕೂತು ಅವರೊಂದಿಗೆ

ಶಾಲೆಯ ವಿಚಾರ ಮಾತನಾಡಿದ್ದಳು. ಆದರೆ ಆ "ಹಿಂದಿನ ಗಳಿಗೆ"ಗೂ "ಇಂದಿನ ಗಳಿಗೆ"ಗೂ ತುಂಬ ವ್ಯತ್ಯಾಸವಿತ್ತು. ಈಚೆಗೆ ನಾಲ್ಕಾರು ತಿಂಗಳುಗಳಿಂದ ಅವರು ತನ್ನೊಂದಿಗೆ ವರ್ತಿಸುತ್ತಿದ್ದ ವಿಲಕ್ಷಣ ರೀತಿ, ತೋರುತ್ತಿದ್ದ ವಿಚಿತ್ರ ಸಲುಗೆ, ಆಡುತ್ತಿದ್ದ ಸ್ವಚ್ಛಂದದ ಮಾತು-ಅವಳನ್ನು ಆ ಕುರ್ಚಿಯಿಂದ ದೂರ ನಿಲ್ಲಿಸುತ್ತಿತ್ತು. ಮದ್ದೂರಾಯರ ಆ ಬಯಕೆಯ ಭಾವ, ಕರೆಯುವ ಕಣ್ಣು, ಆಹ್ವಾನಿಸುವ ಮಂದಹಾಸ, ಬೇಟೆಗಾರನ ಹೊಂಚು! ಹೆಣ್ಣಿನ ಸೂಕ್ಷ್ಮಬುದ್ಧಿ ಅದನ್ನೆಲ್ಲ ಎಂದೋ ಅರಿತು ಕೊಂಡಿತ್ತು.

"ಏನು ಹೇಳಿಬಿಡಿ ರಾಯರೆ! ಏಕೆ ಕರೆಯಿಸಿದಿರಿ? ಮಗು ಶಾಲೆಯಿಂದ ಬಂದಿದ್ದಾನು. ಹಸಿದಿರುತ್ತಾನೆ. ನಾನು ಹೋಗಬೇಕು" ಎಂದಳು.

ಹುಬ್ಬುಗಂಟಿಕ್ಕಿಕೊಂಡು, ತುಟಿ ಕಚ್ಚಿಕೊಂಡು ರಾಯರು ಅವಳನ್ನೊಮ್ಮೆ ಅಡಿಯಿಂದ ಮುಡಿಯವರೆಗೂ ನಿಟ್ಟಿಸಿ ನೋಡಿದರು. ಹತ್ತಾರು ಕಡೆ ಹರಿದುಹೋದ ಸೀರೆ, ಮಾಸಿದ ಹರಕು ರವಕೆ, ಸೊರಗಿ ಕೃಶವಾದ ಶರೀರ, ಬಾಡಿದ ಮುಖ, ಒಣಗಿದ ಕೂದಲು! ಅವರ ಕಂಗಳಲ್ಲಿ ವಿಚಿತ್ರ ಕಳೆಯೊಂದು ಮಿನುಗಿತು. ಮೇಜಿನೊಳಗಿಂದ ಒಂದು ಕವರು ತೆಗೆದು ಅವಳ ಕೈಗಿಡುತ್ತ ಹೇಳಿದರು.

"ಸರಿ! ನಿಮಗೆ ಹೊತ್ತಾಗಿದೆ. ಉಪಾಯವಿಲ್ಲ. ಈ ಕಾಗದ ಓದಿನೋಡಿ. ಅಂದರೆ ಎಲ್ಲಾ ತಿಳಿಯುತ್ತೆ. ನಾಳೆ ಬೆಳಗ್ಗೆ ಉತ್ತರ ಕೊಡಿ. ಆಯಿತೇ?"

ಅದನ್ನು ಕೈಗೆತ್ತಿಕೊಳ್ಳಲಾಗಲಿಲ್ಲ ಅವಳಿಗೆ. ಕತ್ತಲೆಯ ರಾತ್ರಿಯಲ್ಲಿ ಬೋನಿಗೆ ಬೀಳುವ ಹುಲಿಯಂತಾಯಿತು ಅವಳ ಸ್ಥಿತಿ. ಹೇಗೋ ಅದನ್ನು ಹಿಡಿದುಕೊಂಡು ಶಾಲೆಯ ಕಟ್ಟಡವನ್ನು ಬಿಟ್ಟು ಬರಬೇಕಾದರೆ ಬೆಂಕಿಯ ಮನೆಯಿಂದ ಪಾರಾಗಿ ಬಂದಂತಾಯಿತು. ಎಷ್ಟು ಬೇಗ ಅಲ್ಲಿಂದ ದೂರ ಹೋದಷ್ಟೂ ಒಳ್ಳೆಯದೆ ಎಂದುಕೊಂಡಳು. ರಭಸದಿಂದ ಅಡಿಯಿಡುತ್ತ ಮನೆಗೆ ಬಂದಳು.

ಆ ಕಾಗದವನ್ನೊಡೆದು ಓದಬೇಕಾದ ಅಗತ್ಯವೇನೂ ಇರಲಿಲ್ಲ. ಅದರಲ್ಲಿ ಬರೆದಿದ್ದ ವಿಷಯವನ್ನೆಲ್ಲ ಅರಿಯಲು ರಾಯರ ದೃಷ್ಟಿಯೊಂದೇ

ಸಾಕಾಗಿತ್ತು. "ನನಗೆ ಗೊತ್ತು ಜಯಾ. ನೀನು ಕಷ್ಟದಲ್ಲಿದ್ದೀಯೆ. ಕಾಸಿಲ್ಲ ನಿನ್ನ ಕೈಯಲ್ಲಿ. ಸಹಾಯಮಾಡುವಂಥ ಬಂಧುಗಳೂ ಇಲ್ಲ. ನಿನ್ನ ಮನೆ ಬರಿದಾಗಿದೆಯೆಂಬುವನ್ನು ನಾನು ಬಲ್ಲೆ. ನೀನು, ನಿನ್ನ ಮಗ ಇಬ್ಬರೂ ಬಟ್ಟೆಯಿಲ್ಲದೆ ಬಳಲುತ್ತಿರುವುದನ್ನೂ ಬಲ್ಲೆ. ನಿನ್ನ ಮನೆಯಲ್ಲಿ ಅಕ್ಕಿ, ಜೋಳ, ಬೇಳೆ, ಉಪ್ಪು ಯಾವುದೂ ಇಲ್ಲವೆಂಬುದೂ ನನಗೆ ಗೊತ್ತು. ನಿನ್ನ ಗಂಡನಂತೂ ಬರುವ ಹಾಗಿಲ್ಲ. ಹೇಳಿ ಕೇಳಿ ಡೆಟಿನ್ಯೂ. ಇನ್ನೂ ಎಷ್ಟು ವರ್ಷ ಜೈಲಿನಲ್ಲಿರುವನೋ ನಿಯಮವಿಲ್ಲ. ಅವನು ಬರುವವರೆಗೂ ನಿಮ್ಮ ಗತಿಯೇನು ? ಇಂದಿಲ್ಲ ನಾಳೆ ನೀನು-ನಿನ್ನ ಮಗ ಇಬ್ಬರೂ ಉಪವಾಸ ಸಾಯಬೇಕಾಗುತ್ತದೆ. ಈಗಲೇ ಆ ಸ್ಥಿತಿ ಬಂದಿದ್ದರೂ ಇದ್ದೀತು! ನನ್ನ ಮಾತು ಕೇಳು. ಎಲ್ಲಾ ಸರಿಹೋಗುತ್ತದೆ. ಅನಂತರ ನೀನು ಕಷ್ಟದಲ್ಲಿರಬೇಕಾದ ಅಗತ್ಯವೇ ಇಲ್ಲ. ನಿನಗೂ ನಿನ್ನ ಮಗನಿಗೂ ಮೈತುಂಬ ಬಟ್ಟೆ, ಹೊಟ್ಟೆತುಂಬ ಊಟ, ಕೈ ತುಂಬ ಕಾಸು....ಕೇಳು. ಎಷ್ಟು ಸುಲಭ ಈ ದಾರಿ....ನನ್ನ ಮಾತು ಕೇಳು...."

"ಕೇಳಲಾರೆ! ಕೇಳಲಾರೆ!" ಎಂದರೂ ಮತ್ತೆ ಮತ್ತೆ ಕೇಳಿಸುತ್ತಲೇ ಇದೆ ಆ ವಿಕಟ ಸ್ವರ. ಬಾಳಿನ ಹೋರಾಟದಲ್ಲಿ ಸಿಕ್ಕಿ ನರಳಿದ ತನ್ನ ಎದೆಯನ್ನು ತಿವಿದು ದೌರ್ಬಲ್ಯಕ್ಕೆ ಏಟು ಹಾಕಲು ಪ್ರಯತ್ನಿಸುತ್ತಿದೆ— ಈ ದುಡ್ಡಿನ ಕಾಮುಕ ದೃಷ್ಟಿ. "ಇಲ್ಲ. ಇಲ್ಲ. ನಾನು ದುರ್ಬಲಳಾಗಲಾರೆ. ನಿರಾಶಳಾಗಲಾರೆ, ಸೋತುಹೋಗಲಾರೆ" ಎಂದಿತು ಅಭಿಮಾನೀ ಭಾರತ ನಾರೀ ಹೃದಯ. ವಾಸ್ತವತೆ ಅದನ್ನು ಅಣಕಿಸುವಂತೆ ವಿಕಟ ಹಾಸ್ಯಮಾಡಿ ಕೂಗಿಕೊಂಡಿತು. "ಅಯ್ಯೋ ಹುಚ್ಚಿ! ಹೋಯ್ತು ಆ ಕಾಲ! ಹೆಣ್ಣಿನ ಶೀಲಕ್ಕೆ ಏನು ಬೆಲೆ ಉಳಿದಿವೆ ಇಂದಿನ ಜಗತ್ತಿನಲ್ಲಿ? ಈ ಗುಲಾಮ ಭಾರತದಲ್ಲಿ? ಬಂಗಾಲದ—ಬಿಜಾಪುರದ ಕತೆ ತಿಳಿಯದೇ ನಿನಗೆ? ತುತ್ತು ಕೂಳಿಗಾಗಿ ಹತ್ತು ಮಕ್ಕಳ ತಾಯಂದಿರು ಸಹ ದೇಹ ಮಾರಿಕೊಂಡರು. ತಮ್ಮ ಎಳೆ ಹೆಣ್ಣು ಮಕ್ಕಳನ್ನೂ ವಿಕ್ರಯಿಸಿದರು. ದುಡ್ಡಿನ ಬಲದಿಂದ ಮದಾಂಧವಾದ ಕಾಮದ ಪಶುವಿಗೆ ಭಾರತ ನಾರೀ ಮಾನ ಬಲಿಯಾಯಿತು. ಒಂದು ಕಡೆಯೆ? ಎರಡು ಕಡೆಯೆ? ಎಲ್ಲೆಲ್ಲೂ ನಡೆದಿವೆ ಈ ಶೀಲದ ಬಲಿದಾನ! ಇಂಥ ದೇಶವ್ಯಾಪಿ ಕಾಕ್ಷಿಚ್ಚಿನಲ್ಲಿ ನೀನೊ

ಬ್ಬಳಿ ಉಳಿದುಕೊಳ್ಳುವುದು ಸಾಧ್ಯವೆ? ಅದೋ! ಭೀಕರ ಜ್ವಾಲೆ ನ ಗ್ಗುತ್ತಿದೆ ನಿನ್ನೆಡೆಗೆ ಸಾವಿರ ನಾಲಗೆ ಚಾಚಿ! ಉಳಿದೀತೇ ನಿನ್ನ ಶೀಲ! ಹೊಪ್ಹೊ ಹೊ!"

ಸುಂಟರ ಗಾಳಿಗೆ ಸಿಕ್ಕಿದಂತಾಗಿ ತುಯ್ಯುತ್ತಿತ್ತು ಮನಸ್ಸು. ಅವಳಿಗೆ ತಿಳಿಯದಂತೆಯೆ ಅವಳ ಕೈ ಆ ಕವರನ್ನೊಡೆಯಿತು. ಅದರಲ್ಲಿದ್ದುದು—

— ಹತ್ತು ರೂಪಾಯಿನ ಐದು ನೋಟುಗಳು!

ಅವನ್ನು ಕೈಗೆತ್ತಿಕೊಳ್ಳಲಾಗಲಿಲ್ಲ ಆಕೆಗೆ. ವಿಷಮುತೆಯ ಪಶು ಅವುಗಳ ರೂಪದಲ್ಲಿ ತನ್ನನ್ನು ಅವಚಿ ಹಿಡಿದು ಪುಡಿಪುಡಿ ಮಾಡಲು ಬಂದ ಹಾಗೆ ತೋರಿತು. "ಎಲ್ಲ ಅನರ್ಥಕ್ಕೂ ಸಹಾಯಕಾರಿಯಾವ ಈ ವಿಷಮುತೆ! ದೇಶದ ಆರ್ಥಿಕ ದುಃಸ್ಥಿತಿ, ಘೋರ ದಾರಿದ್ರ್ಯ, ಸ್ತ್ರೀಯರ ಪರಾವಲಂಬಿ ಸ್ಥಿತಿ — ಶ್ರೀಮಂತರ ಅತ್ಯಾಚಾರ — ದಲಿತರ ಹಾಹಾಕಾರ — ಎಲ್ಲಕ್ಕೂ ಮೂಲಕಾರಣ ಈ ವಿಷಮತೆ! ಅದು ತೊಲಗಬೇಕು — ನಮ್ಮ ಸರ್ಕಾರ ಬರಬೇಕು — ಜನರ ಸರ್ಕಾರ ಬರಬೇಕು — ಬಡವರ ಸರ್ಕಾರ ಬರಬೇಕು — ಬಂದೀತೇ? ಆಃ? ಬಂದೀತೆ? ಇನ್ನೂ ಎಷ್ಟು ದಿನ ಅಂತ ಈ ವನವಾಸ? ಆಯ್ಯೋ! ಎಷ್ಟು ದಿನ ಈ ಉಪವಾಸ?"

ಉಪವಾಸ ಎನ್ನುತ್ತಲೂ ಅವಳ ಕಣ್ಣೆದುರು ಬಂಗಾಲ ಬಂತು! ವಿಜಾಪುರ ಬಂತು! ತನ್ನ ಮತ್ತು ತನ್ನ ಮಗನ ಮಾತು ಹಾಗಿರಲಿ — ಒಂದು ಹೊತ್ತಿನ ಊಟವಾದರೂ ಸಿಕ್ಕುತ್ತಿತ್ತು ತಮಗೆ. ಆದರೆ ಅಲ್ಲಿನ ಜನ? ನಮ್ಮ ನಾಡಿನಲ್ಲೇ ಹುಟ್ಟಿದ, ನಮ್ಮ ನಾಡಿನಲ್ಲೇ ಬೆಳೆದ ಆ ಲಕ್ಷಾವಧಿ ಜನ? ಅನ್ನ ಸಿಕ್ಕದೆ ರಕ್ತ ಬತ್ತಿಹೋಗಿ, ಮೂಳೆ ಒಣಗಿ ಹೋಗಿ, ಉಸಿರು ಕಟ್ಟಿಹೋಗಿ ಸಾಯಬೇಕಾಯಿತಲ್ಲಾ! ಆಗಸ್ಟ್ ೪೨ ರಿಂದ ಆಗಸ್ಟ್ ೪೫! ಈ ಮೂರು ವರ್ಷಗಳ ಅವಧಿಯಲ್ಲಿ ಎಂಥ ದುರಂತ ಕಾಂಡ ನಡೆಯಿತು ನಮ್ಮ ಪ್ರಿಯ ದೇಶದಲ್ಲಿ! "ಕ್ವಿಟ್ ಇಂಡಿಯಾ" ಘೋಷಣೆ — "ಮಾಡಿರಿ; ಇಲ್ಲ-ಮಡಿಯಿರಿ" ಎಂಬ ಸಂದೇಶ — ಮುಖಂಡರ ಬಂಧನ — ಸರ್ಕಾರದ ದಬ್ಬಾಳಿಕೆ — ಪೋಲೀಸ್-ಮಿಲಿಟರಿ ರಾಜ್ಯ — ಲಾಠೀ ಚಾರ್ಜು—ಗೋಳೀಬಾರ್—ಗ್ಯಾಸ್ ದಾಳಿ—ಮಶಿನ್ ಗನ್ ಹೊಡೆತ — ನೂರಾರು ಜನರ ಕೊಲೆ — ರಕ್ತಪಾತ — ಫಾಸೀ —

ಫಾಸೀ ! ಘೋರ ಘೋರ ಶಿಕ್ಷೆಗಳು ! ಎಷ್ಟು ಲಕ್ಷ ಜನ ಕಷ್ಟಪಟ್ಟರು ! ಎಷ್ಟು ಸಂಸಾರ ಹಾಳಾದುವು ! ಎಷ್ಟು ಜನ ಸುಮಂಗಲೆಯರು ಅಮಂಗಲೆಯರಾದರು ! ಎಷ್ಟು ಜನ ತಾಯಂದಿರು ತಮ್ಮ ಕೂಸುಗಳನ್ನು ಪೋಲೀಸರ ಗುಂಡಿಗೆ ಆಹುತಿ ಕೊಟ್ಟರು ! ಈ ನಲವತ್ತು ಕೋಟಿ ಜನರ ಅಪೂರ್ವ ಧೈರ್ಯ, ಕೆಚ್ಚು, ದೇಶಪ್ರೀತಿ, ಅದ್ವಿತೀಯ ಬಲಿದಾನ, ಅದ್ಭುತ ತ್ಯಾಗ! ತನ್ನ ಕಷ್ಟ ಅಂದರೆ ಎಷ್ಟು ಕ್ಷುಲ್ಲಕ ಇದರೆದುರಿನಲ್ಲಿ ! ಈ ದೇಶದಲ್ಲಿ ಹುಟ್ಟಿ ಬಂದುದಕ್ಕೆ, ಈ ನೆಲಕ್ಕೆ ಭಾರವಾಗಿ ಜೀವಿಸಿರುವುದಕ್ಕೆ ಅಷ್ಟಾದರೂ ತ್ಯಾಗ ಮಾಡಬೇಡವೇ ತಾನು ? ಎಷ್ಟು ಕಷ್ಟ ಬಂದರೂ ಸಹಿಸಬೇಕು. ತುಟಿ ಪಿಟಿಕ್ಕೆನ್ನವೆ ಸಹಿಸಬೇಕು. ದೇಶಕ್ಕಾಗಿ ಪತಿ ಸೆರೆಮನೆಯಲ್ಲಿ ಕೊಳೆಯುತ್ತಿದ್ದಾನೆ. ಒಂದಲ್ಲ ಒಂದು ದಿನ ನಮ್ಮ ಹೋರಾಟ ಮುಗಿದೇ ಮುಗಿಯುತ್ತದೆ ! ಭಾರತಕ್ಕೊ "ವಿಜಯ" ದೊರೆತೇ ದೊರೆಯುತ್ತದೆ ! ಅಲ್ಲಿಯವರೆಗೂ ತಾನು ಧೈರ್ಯದಿಂದಿರಬೇಕು. ಶಾಲೆ ಬಿಡುವ ಸಂದರ್ಭ ಬಂದರೂ ಪರವಾಯಿಲ್ಲ. ದುಡ್ಡಿನ ದೊಡ್ಡಪ್ಪಂದಿರಿಗೆ ಶರಣು ಹೋಗಕೂಡದು. ಈ ಐವತ್ತು ರೂಪಾಯಿಗಳಿಗಾಗಿ, ಈ ಕ್ಷುಲ್ಲಕ ನೋಟುಗಳಿಗಾಗಿ ತನ್ನ ಶರೀರ ಮಾರಿಕೊಳ್ಳುವುದೇ ? ಥೂ ! ಅಂಥ ಹೊಲಸು ವಿಚಾರವೂ ಬೇಡ ತನ್ನ ತಲೆಯಲ್ಲಿ !

ಕೆಳಕ್ಕೆ ಬಿದ್ದಿದ್ದ ಆ ನೋಟುಗಳನ್ನೆತ್ತಿ ಹರಿದು ತುಂಡು ತುಂಡು ಮಾಡಿದಳು ಜಯಾ. ಅದೇ ಕವರಿನಲ್ಲಿ ಆ ಚೂರುಗಳನ್ನು ತುಂಬಿ ಜತೆಯಲ್ಲಿ ಒಂದು ಪುಟ್ಟ ಚೀಟಿ ಸೇರಿಸಿದಳು.

"ನಿಮ್ಮ ಕಾಗದಕ್ಕೆ ಈ ನೋಟಿನ ಚೂರುಗಳೇ ಉತ್ತರ ಹೇಳುತ್ತವೆ. ಇನ್ನೊಮ್ಮೆ ನನ್ನ ತಂಟೆಗೆ ಬಂದೀರಿ ! ಹುಷಾರಿ ! ನಾನು ಬೆಳಗಾವಿ ಜಿಲ್ಲೆಯವಳೆಂಬುದು ನೆನಪಿನಲ್ಲಿರಲಿ. ಕಿತ್ತೂರ ಚೆನ್ನಮ್ಮ ರಾಣಿಯ ರಕ್ತ ನನ್ನ ಮೈಯಲ್ಲಿ ಹರಿಯುತ್ತಿದೆಯೆಂಬುದೂ ಲಕ್ಷ್ಯದಲ್ಲಿರಲಿ."

ಕವರು ಅಂಟಿಸಿಬಿಟ್ಟು ಅಡಿಗೆಯ ಕೊಟಡಿಗೆ ಬಂದಳು. ಬೆಳಗ್ಗೆ ಎರಡು ರೊಟ್ಟಿ ತಿಂದಿದ್ದುದೆಷ್ಟೋ ಅಷ್ಟೆ. ಇದುವರೆಗೂ ಹೊಟ್ಟೆಗೆ ಏನೂ ಬಿದ್ದಿರಲಿಲ್ಲ. ಹೌದು. "ಆ" ಎನ್ನುತ್ತಿದೆ ಹಸಿವು. ಈಗಲೋ ಇನ್ನೊಂದು ಗಳಿಗೆಗೊ ಚಂದ್ರ ಬೇರೆ ಬಂದುಬಿಡುತ್ತಾನೆ — ಹಸಿದು ಹಸಿದು ! — ಏನು

ಕೊಡುವುದು ಅವನಿಗೆ ? ರೊಟ್ಟಿ ಎಲ್ಲಾ ಬೆಳಗಿನಲ್ಲೆ ತೀರಿಹೋದುದು. ಹಿಟ್ಟೊ ಆಗಿಹೋಯಿತು. ಡಬ್ಬಿಗಳೆಲ್ಲಾ ಬರಿದೋ ಬರಿದು ! — ಮನೆಯಲ್ಲಿ ಏನೂ ಇಲ್ಲ.

ವಸ್ತುಸ್ಥಿತಿಯ ಅರಿವಾಗುತ್ತಲೂ ಮತ್ತೆ ಅವಳ ಹೃದಯ ಹೊಯ್ದಾಡ ತೊಡಗಿತು ತನಗೂ-ತನ್ನ ಮಗುವಿಗೂ ಉಪವಾಸವೇ ಗತಿಯೇ ? — ಎಂದು ಯೋಚಿಸಿದಾಗ ಕಣ್ಣಿಗೆ ಕತ್ತಲೆ ಕವಿದಂತಾಯಿತು. ನೋಟುಗಳನ್ನು ಹರಿದು ಹಾಕಿದುದು ತಪ್ಪಾಯಿತೇನೋ—ಎಂಬ ಯೋಚನೆಯೂ ಒಂದುಬಾರಿ ಮೆಲ್ಲನೆ ಸುಳಿದುಹೋಯಿತು.

ಆ ವಿಚಾರ ಬರುವುದಕ್ಕೂ, ಕೈಲಿ ಪೊಟ್ಟಣವೊಂದನ್ನು ಹಿಡಿದು ಕೊಂಡು ಚಂದ್ರ ಧಾವಿಸಿ ಬರುವುದಕ್ಕೂ ಸರಿಹೋಯಿತು.

" ಅಮ್ಮಾ, ಇಂದು ದೊಡ್ಡ ಸಭೆ ಇದೆ ಗಾಂಧೀ ಬೈಲಿನಲ್ಲಿ. ಇಬ್ಬರೂ ಹೋಗೋಣ ನಡೀ. ಗೊತ್ತಿಲ್ಲವೆ ನಿನಗೆ ? ಇಂದು ಆಗಸ್ಟ್ ಒಂಬತ್ತು ! "

" ಆಗಸ್ಟ್ ಒಂಬತ್ತು! "

ಎಂಥ ರೋಮಾಂಚಕಾರಿ ಶಬ್ದ ಅದು ! ಜಯಳ ಮೈಯೆಲ್ಲ ಒಮ್ಮೆಲೇ ನಿಮಿರಿ ನಿಂತಿತು. ಎಲ್ಲ ದಿಕ್ಕುಗಳಿಂದಲೂ ಅಪಾರ ಶಕ್ತಿ ಚಿಮ್ಮಿ, ಚೈತನ್ಯ, ಸ್ಫೂರ್ತಿ ಹಾರಿ ಬಂದು ನೆತ್ತರದಲ್ಲಿ ಬೆರೆತಂತಾಯಿತು ! ದೌರ್ಬಲ್ಯದ ಪಾತಾಳಕ್ಕೆ ಬೀಳುತ್ತಿದ್ದ ಮನಸ್ಸನ್ನು ಅದು ವಿಲಕ್ಷಣವಾದ ಮಾಂತ್ರಿಕ ಶಕ್ತಿಯಿಂದ ಎತ್ತಿ ಹಿಡಿದಂತಾಯಿತು ; ಅಸ್ಥಿರತೆಯೆಲ್ಲವನ್ನೂ ಒಂದೇಟಿಗೇ ಗುಡಿಸಿ ಬಿಸುಟ ಸಂತತ ಹೋರಾಟದ ಕಿಡಿ ಹೊತ್ತಿಸಿದಂತಾಯಿತು. ಕೋಟ್ಯಾನುಕೋಟಿ ಭಾರತ ಮಕ್ಕಳ ಅಪೂರ್ವ ತ್ಯಾಗ-ಬಲಿದಾನಗಳಿಂದ ಪವಿತ್ರವಾದ ಆ ಶಬ್ದ ಅವಳೆದೆಯಲ್ಲಿ ಸ್ವಾತಂತ್ರ್ಯದ ಜ್ಯೋತಿಯನ್ನು ಮತ್ತೆ ಬೆಳಗಿಸಿದಂತಾಯಿತು.

ಚಂದ್ರ ಹೇಳುತ್ತಿದ್ದ :

" ತಗೋ. ಈ ಖಾಲೀದೋಸೆ ತಿನ್ನು ಅಮ್ಮ ! ನನಗೆ ಗೊತ್ತು. ಮನೇಲಿ ಏನೂ ಇಲ್ಲ. ಅದಕ್ಕಾಗಿಯೇ ಇಂದಿನಿಂದ ನಾನು ಕೆಲಸಕ್ಕೆ ಹೋಗುತ್ತಿದ್ದೇನೆ. ಸಂಜೆಯಲ್ಲಿ ದಿನಪತ್ರಿಕೆ ಮಾರಿದರೆ ನಾಲ್ಕೈದಾಣೆ ಸಿಕ್ಕುತ್ತವಮ್ಮಾ. ಇನ್ನು ಮೇಲೆ ನೀನು ಶಾಲೆಗೆ ಹೋಗುವುದೂ ಬೇಡ.

ಬಿಟ್ಟುಬಿಡು. ನಾನು ದೊಡ್ಡವನಾಗಲಿಲ್ಲವೆ? ಅಪ್ಪ ಬರುವವರೆಗೂ ನಾನೇ ದುಡಿದುಕೊಂಡು ಬರುತ್ತೇನೆ. ಬೇಕಾದರೆ ಶಾಲೆಯನ್ನೂ ಬಿಟ್ಟು ಬಿಡುತ್ತೇನೆ. ಅವರು ಕಲಿಸೋದೂ ಅಷ್ಟರಲ್ಲೇ ಇದೆ."

ಆನಂದ, ಅಭಿಮಾನ, ಅಕ್ಕರತೆ ಚಿಮ್ಮಿ ನೆಗೆದು, ಜಯಳ ಕಣ್ಣುಗಳಲ್ಲಿ ನೀರಾಗಿ ತುಂಬಿ ಬಂತು. "ತಂದೆಗೆ ತಕ್ಕ ಮಗ ನೀನು ನನ್ನ ಕಂದಾ!" ಎಂದು ಅವನನ್ನು ಬರಸೆಳೆದು ಮೃದುವಾಗಿ ತಬ್ಬಿಕೊಂಡಳು.

ಬೀದಿಯಲ್ಲಿ ಮೆರವಣಿಗೆ ಹೊರಟ ಮಕ್ಕಳು ದನಿಯೆತ್ತಿ ಹಾಡುವುದು ಕೇಳಿಸುತ್ತಿತ್ತು.

"ಬೀಳಲಿ ಮೈ ನೆತ್ತರು ಕಾರಿ
ಹೋದರೆ ಹೋಗಲಿ ತಲೆ ಹಾರಿ
ತಾಯ್ನಾಡಿನ ಮೇಲ್ಮೆಗೆ ಹೋರಿ
ಸ್ವಾತಂತ್ರ್ಯದ ಸ್ವರ್ಗಕೆ ಏರಿ!"

— ಆಗಸ್ಟ್ ೯ ೧೯೪೫.

# ರಕ್ತ-ಧ್ವಜ

" India will never forget that boy "

—Jawaharlal Nehru

ಹುಡುಗ ಹೊರಟು ನಿಂತಿದ್ದ.

ತನ್ನ ಹುಡುಗ, ತನ್ನ ಕಿಸನ್, ತನ್ನ ಒಬ್ಬನೇ ಒಬ್ಬ ಮಗ ಕಿಸನ್, ತಾಯನ್ನು ಕಳೆದುಕೊಂಡ ತಬ್ಬಲಿ, ಬರೀ ಹತ್ತು ವರ್ಷ ವಯಸ್ಸಿನ ಹಸುಳೆ, ಕುರುಡನಾದ ತನಗೆ ಊರೆಗೋಲಿನಂತಿದ್ದ ಕಿಸನ್-ಹೊರಟು ನಿಂತಿದ್ದ. ಯಾವ ಊರಿಗೂ ಅಲ್ಲ. ಯಾವ ಪಯಣಕ್ಕೂ ಅಲ್ಲ. ಅದೇ ಊರಿನಲ್ಲೇ ನಡೆಯುತ್ತಲಿದ್ದ ಧ್ವಜಾರೋಹಣ ನೋಡಲು ಹೊರಟಿದ್ದ.

ತನ್ನ ಕುರುಡುಕಣ್ಣುಗಳಿಂದುದುರುತ್ತಿದ್ದ ಕಂಬನಿಗಳನ್ನು ನಿಧಾನವಾಗಿ ಒರೆಸಿಕೊಳ್ಳುತ್ತ, ಮಗನ ಬೆನ್ನ ಮೇಲೆಲ್ಲ ಅಕ್ಕರೆಯಿಂದ ಕೈಯಾಡಿಸುತ್ತ —

' ಜೋಕೆ ಕಣಪ್ಪಾ ಮಗೂ, ಇನ್ನೂ ಬಹಳ ಸಣ್ಣವ ನೀನು ! ' ಎಂದ ರಾಮಸಿಂಗ.

ಅವನ ದನಿ ನಡುಗುತ್ತಿತ್ತು. ಕೈ ನಡುಗುತ್ತಿತ್ತು. ಎದೆ ಬಲವಾಗಿ ಹೊಡೆದುಕೊಳ್ಳುತ್ತಿತ್ತು. ನೂರು ಶಂಕೆಗಳಿಂದ ಹೃದಯ ತುಡಿಯುತ್ತಿತ್ತು. ಇಪ್ಪತ್ತೈದು ವರ್ಷಗಳಿಗೆ ಹಿಂದೆ-ಬ್ರಿಟಿಷ್ ಸೈನ್ಯದಲ್ಲಿ ತಾನು ಶಿಪಾಯಿಯಾಗಿದ್ದಾಗ ಕಂಡ ಭೀಕರ ಸಂಗ್ರಾಮದ ಚಿತ್ರ ಮತ್ತೆ ಅಂತರ್ದೃಷ್ಟಿಯೆದುರಿಗೆ ಮೂಡುತ್ತಿತ್ತು. ಆ ವೈರಿ ಸೈನಿಕರು ...ಮದ್ದು-ಗುಂಡು ಬಾಂಬು-ಹಾಹಾಕಾರ....ಕಣ್ಣುಗಳೆರಡನ್ನೂ ಆ ರಣಮಾರಿಗೆ ಬಲಿಕೊಟ್ಟು ತಾನು ಬದುಕಿ ಬಂದುದೇ ಆಶ್ಚರ್ಯದ ಮಾತು. ಇನ್ನು ಈ ಮಗು........ ಬ್ರಿಟಿಷ್ ಪೋಲೀಸರೆಂದರೇನು ತನಗರಿಯದವರೇ....ಅವರ ಲಾಠಿ....ಅವರ ಕೋವಿ....ಅವರ ಗುಂಡು....ಅವರ ಬರ್ಜಿ....

' ಕಿಸನ್....ಕಿಸನ್....'

ತಂದೆಯ ಹೃದಯದಲ್ಲಿ ನಡೆದ ಕೋಲಾಹಲದ ಅರಿವಾಗದಿರಲಿಲ್ಲ ಕಿಸನ್‌ಗೆ. ಮಮತೆಯಿಂದ ಆತನ ಶಾಲನ್ನು ಸರಿಗೊಳಿಸುತ್ತ —

'ಏನಪ್ಪಾ?' ಎಂದ.

'ಯಾಕೋ ಕಾಣೆ. ನನಗೆ ಹೇಗೆ ಹೇಗೋ ಅನ್ನಿಸ್ತಾ ಇದೆ ಮಗೂ. ಹುಷಾರಾಗಿರು ಕಿಸನ್. ಪೋಲೀಸರು ಬಂದು ಬಿಟ್ಟರೆ.... ...'

'ಇಲ್ಲಪ್ಪಾ. ಅವರೆಲ್ಲಿ ಬರ್ತ್ತಾರೆ ಈ ಊರಿಗೆ? ಬರೋಕೆ ಧೈರ್ಯ್ಯಾ ನೀವರೂ ಬೇಕಲ್ಲ? ಒಂದು ವಾರವಾಯಿತು. ಊರೆಲ್ಲಾ ನಮ್ಮ ಕೈಲೇ ಇದೆ. ಮುನ್ಸಿಫ್ ಕೋರ್ಟನ್ನೂ ಹಿಡಿದುಕೊಂಡಿದ್ದೇವೆ. ಅದರ ಮೇಲೇ ರಾಷ್ಟ್ರಧ್ವಜ ಹಾರಿಸಬೇಕಾದ್ದು ಇಂದು. ನೀನೇನೂ ಚಿಂತೆ ಮಾಡ ಬೇಡಪ್ಪ. ನಾನೇನು ಸಣ್ಣವನೇ?'

'ಅಲ್ಲ....ಅಲ್ಲ....ಹಾಗೇನೂ ಅಲ್ಲ...ಆದರೂ....' ರಾಮಸಿಂಗನಿಗೆ ಮುಂದೆ ಮಾತನಾಡಲಾಗಲಿಲ್ಲ. ಅವನ ಮುಖದ ಮೇಲೆ ಮೂಡಿದ ಭಾವನೆಯೇ ಮಾತನಾಡುತ್ತಿತ್ತು. ಆತನ ಜೀವಹೀನ ಕಣ್ಣಬೊಂಬೆ ಗಳಲ್ಲೂ ಕೂಡ ಕಳವಳದ ಕಪ್ಪು ನೆಳಲು ಮೂಡುತ್ತಿತ್ತು.

'ನೀನು ಚಿಂತೆ ಮಾಡೋ ಹಾಗಿದ್ದರೆ ನಾನೇನೂ ಹೋಗೋದಿಲ್ಲಪ್ಪ.' ಎಂದ ಕಿಸನ್-ತಂದೆಯ ಕಳವಳವನ್ನು ಕಂಡು.

'ಛೆ! ಛೆ! ಬೇಡ ಅಂದೆನೇ ನಾ ನಿನಗೆ? ಅಗತ್ಯವಾಗಿ ಹೋಗು. ನಾನಂತೂ ನಮ್ಮ ದೇಶಕ್ಕೆ ಸೇವೆ ಸಲ್ಲಿಸಲಾಗಲಿಲ್ಲ. ಆ ಬ್ರಿಟಿಷ್ ಸರಕಾರಕ್ಕಾಗಿ ಯುದ್ಧಕ್ಕೆ ಹೋಗಿ ಅವರಿಗಾಗಿ ಈ ಕಣ್ಣುಗಳನ್ನು ಬಲಿಕೊಟ್ಟೆ. ಕುರುಡನಿಂದೇನಾದೀತು ಈಗ ಚಳವಳಿಯ ಕೆಲಸ? ನಾನು ಮಾಡಲಾಗದ್ದನ್ನು ನೀನು ಮಾಡುತ್ತಿದೀಯ. ಅಗತ್ಯವಾಗಿ ಮಾಡು. ಧ್ವಜವಂದನೆಗೂ ಹೋಗು. ಮೆರವಣಿಗೆಗೂ ಹೋಗು. ಆದರೂ....'

ಕುರುಡನ ಹೃದಯದಲ್ಲಿ ತುಮುಲ ಹೋರಾಟ ನಡೆದಿದ್ದುದು ಸ್ಪಷ್ಟವಾಗಿ ವ್ಯಕ್ತವಾಗುತ್ತಿತ್ತು. ಹೊರಟಿರುವ ಮಗನಿಗೆ ಬಾಯಿಯಿಂದ 'ಬೇಡ' ಎನ್ನಲಾರ. ಹೃದಯದಿಂದ 'ಹೋಗು' ಎನ್ನಲಾರ. ಮೊದಲಿ ನಿಂದಲೂ ಯೋಧ್ಧವಂಶ ತಮ್ಮದು. ಯುದ್ಧಕ್ಕೆ—ಅದೂ ಸ್ವಾತಂತ್ರ್ಯದ ಯುದ್ಧಕ್ಕೆ ಹೊರಟು ನಿಂತವರನ್ನು 'ಹೋಗಬೇಡ' ಎಂದು ಹೇಳಿ ನಿಲ್ಲಿಸು

ವುದೂ ಉಂಟೇ ? ಆದರೆ....ತನ್ನ ಮಗ....ತನ್ನ ಒಬ್ಬನೇ ಒಬ್ಬ ಮಗ.... ಕರುಳು ಎಳೆಯುತ್ತಿತ್ತು. ಬಲವಾಗಿ ಎಳೆಯುತ್ತಿತ್ತು.

ಗಾಂಧೀಟೋಪಿಯನ್ನು ತಲೆಗಿರಿಸಿಕೊಂಡು ಸಿದ್ಧನಾದ ಕಿಸನ್. 'ಸುಮ್ಮನೆ ಯೋಚನೆ ಮಾಡಬೇಡಪ್ಪ. ನನಗೇನೂ ಆಗೋದಿಲ್ಲ. ಇವತ್ತಿನ ಕಾರ್ಯಕ್ರಮವೂ ಹೆಚ್ಚಾಗಿಲ್ಲ. ಬರೀ ಧ್ವಜಾರೋಹಣ ಅಷ್ಟೆ. ಮುಗಿಸಿಕೊಂಡು ಈಗ ಬಂದು ಬಿಡ್ತೇನೆ.' ಎಂದು ಹೇಳುತ್ತ, ಗುಡಿಸಿಲಿನ ಬಾಗಿಲನ್ನು ತೆರೆದು ಹೊರಟು ಬಿಟ್ಟ.

ಮಗನ ಅಡಿಗಳ ಸದ್ದು ಗಾಳಿಯಲ್ಲಿ ಕರಗಿಹೋಗುವ ತನಕ ಮೌನ ವಾಗಿ ಕುಳಿತಿದ್ದ ರಾಮಸಿಂಗ ಮೆಲ್ಲನೆ ಹಾಸುಗೆಯ ಮೇಲೊರಗಿದ. ಏನಾಗಿದೆ ಇಂದು ತನ್ನ ಹೃದಯಕ್ಕೆ ? ಎಂಥ ಬಿರುಗಾಳಿ ಅಲ್ಲಿ ! ಏಕೋ, ಏನು ಕಾರಣವೋ, ಯಾವುದೂ ಅರ್ಥವಾಗುವಂತಿಲ್ಲ. ಎಂದೂ ಇಲ್ಲದೆ ಇಂದೇ ಏಕೆ ಈ ಕಳವಳ ? 'ಚಲೇಜಾವ್' ಚಳವಳಿಗಾರಂಭವಾದಂದಿ ನಿಂದ ಪ್ರತಿದಿನವೂ ಕಿಸನ್ ತಪ್ಪದೆ ಹೋಗುತ್ತಿದ್ದರೂ ಎಂದೂ ಈ ರೀತಿ ತನ್ನ ಹೃದಯ ಭಾರವಾಗಿರಲಿಲ್ಲ. ಇಂದು ಬೆಳಗಿನಿಂದ ಮಾತ್ರ ಹೀಗೇಕೆ ? ಯಾವ ಅಶುಭದ ಶಕುನ ಇದು ?—ಏನಿದ್ದೀತು ಇದರ ರಹಸ್ಯ ? 'ದೇವರೇ! ಶ್ರೀರಾಮಚಂದ್ರಾ ! ಹರೇರಾಮ ! ಹರೇರಾಮ !'

ಪ್ರಾರ್ಥನೆಯಲ್ಲೂ ಮನಸ್ಸು ತೊಡಗಲೊಲ್ಲದು. 'ಕಿಸನ್....ಕಿಸನ್ ....ನನ್ನ ಕಿಸನ್....' ಎಂದು ಮಿಡಿಯುತ್ತಿದೆ ಕರುಳತಂತಿ. 'ಯಾವಾಗ ಮರಳುತ್ತಾನೋ ! ಯಾವಾಗ ಆತನನ್ನು ನೋಡುತ್ತೇನೊ ! ಕಿಸನ್ ! ನನ್ನ ಕಿಸನ್....!'

## (೨)

ಊರ ಹೊರಗಿನ ವಿಶಾಲವಾದ ಬಯಲಿನ ನಡುವೆ ಗಂಭೀರವಾಗಿ ತಲೆಯೆತ್ತಿ ನಿಂತಿದ್ದ ಕೋರ್ಟಿನ ಕಟ್ಟಡದ ಬಳಿ ಇಪ್ಪತ್ತುಸಾವಿರ ಜನ ಗುಂಪು ಗೂಡಿತ್ತು. ಮೇಲಕ್ಕೇರಿ ಬರುತ್ತಿದ್ದ ಸೂರ್ಯನ ಕಿರಣಗಳಲ್ಲಿ ಮೋಹಕ ವಾಗಿ ಹೊಳೆಯುತ್ತಿದ್ದ ರಾಷ್ಟ್ರಧ್ವಜಗಳು....ಬೆಳ್ಳಿಯ ಕಿರೀಟಗಳಂತೆ ಕಾಣುವ ಶುಭ್ರ ಗಾಂಧೀಟೋಪಿಗಳು....ಆಗಾಗ ಗುಡುಗಿನಂತೆ ಮೊರೆಯು

ತ್ರಿದ್ದ ಜಯಜಯಕಾರ. 'ಇನ್ಕಿಲಾಬ್, ಜಿಂದಾಬಾದ್!', 'ಭಾರತ ಮಾತಾಕೀ ಜೈ!'........

ಕಟ್ಟಡದ ಗೋಪುರದ ಮೇಲೆ ದೊಡ್ಡದಾದ ರಾಷ್ಟ್ರಧ್ವಜವನ್ನೇರಿಸ ಬೇಕೆಂದು ಮೊದಲೇ ನಿರ್ಧರಿಸಲಾಗಿತ್ತು. ಏಣಿಯನ್ನುಪಯೋಗಿಸದೆ ಆ ಗೋಪುರಕ್ಕೇರುವುದಸಾಧ್ಯವಾಗಿದ್ದಿತಾದರೂ ಏಣಿಯನ್ನು ತರುವ ಯೋಚನೆ ಮಾತ್ರ ಯಾರಿಗೂ ಹೊಳೆದಿರಲಿಲ್ಲ. ಊರಿಗೆ ಹೋಗಿ ಅದನ್ನು ತರುವ ವರೆಗೆ ಕಾದು ನಿಲ್ಲುವ ತಾಳ್ಮೆಯೂ ಜನರಿಗಿರಲಿಲ್ಲ

'ಹುಡುಗರಲ್ಲಿ ಯಾರಾದರೂ ಗೋಪುರಕ್ಕೇರಬಲ್ಲಿರೇನು?' ಎಂದು ಮುಖಂಡನೊಬ್ಬ ವಿಚಾರಿಸಿದ.

ಅಂಥ ಒಂದು ಸಂದರ್ಭಕ್ಕಾಗಿಯೇ ಸಿದ್ಧನಾಗಿ ನಿಂತಿದ್ದ ಉತ್ಸಾಹಿ ಬಾಲಕ ಕಿಸನ್ ತಕ್ಷಣ ಮುಂದೆ ಬಂದು 'ಕೊಡಿ ನನ್ನ ಕೈಗೆ ಧ್ವಜಾನ್ನ. ನಾನು ಹತ್ತುತ್ತೇನೆ!' ಎಂದ.

ಧ್ವಜವನ್ನು ದಾರದಿಂದ ಬೆನ್ನಿಗೆ ಬಿಗಿದುಕೊಂಡು ಕಿಸನ್ ಕೋತಿ ಯನ್ನೂ ಮೀರಿಸುವ ಚಪಲತನದಿಂದ ಕಂಭಗಳನ್ನೇರಿ ಹೋಗಿ ಕ್ಷಣ ಮಾತ್ರದಲ್ಲಿಯೆ ಗೋಪುರವನ್ನು ಮುಟ್ಟಿದ. ಅದರ ಬಳಿಯಲ್ಲಿದ್ದ ಶಿಲೆಯ ಮೇಲೆ ನಿಂತುಕೊಂಡು ಬೆನ್ನಿಗೆ ಬಿಗಿದಿದ್ದ ಧ್ವಜವನ್ನು ಬಿಚ್ಚಿ ಗೋಪುರಕ್ಕೆ ಕಟ್ಟಲಾರಂಭಿಸಿದ.

ಆನಂದ, ಅಭಿಮಾನ ತುಂಬಿದ ಸಾವಿರಾರು ದೃಷ್ಟಿಗಳು ಅವನ ಕಡೆ ಹೊರಳಿದ್ದ ಹಾಗೇ ಹಠಾತ್ತಾಗಿ ಗುಜುಗುಜು ಮಾತಿಗಾರಂಭವಾಯಿತು. ಅದುವರೆಗೂ ಅದೃಶ್ಯರಾಗಿದ್ದ ಪೋಲೀಸರು ಅಕಸ್ಮಾತ್ತಾಗಿ ಕಾಣಿಸಿಕೊಂಡಿದ್ದರು. ಅವರ ಜತೆಗೆ ಸೈನಿಕರು, ಆಂಗ್ಲ ಮ್ಯಾಜಿಸ್ಟ್ರೇಟರು, ಪೋಲೀಸ್ ಸೂಪರಿಂಟೆಂಡೆಂಟ್, ಸಬ್ ಇನಸ್ಪೆಕ್ಟರ್....ಎಲ್ಲರ ಕೈಯಲ್ಲಿ ಪಿಸ್ತೂಲುಗಳು. ಪೋಲೀಸರ ಬಂದೂಕುಗಳು..ಅವುಗಳ ತುದಿಗೆ ಹಿರಿದ ಬರ್ಜಿಗಳು...

ಗೋಪುರದ ಕೆಳಗಡೆ ಬಂದು ಅಧಿಕಾರಿಗಳು ನಿಂತುಕೊಂಡರು. ತಾಲೂಕಿನಲ್ಲಿ ನಡೆವ ಚಳವಳಿಯ ವಿವರಗಳನ್ನು ತಿಳಿದು ಕೆರಳಿ ಕೆಂಡವಾ

ಗಿದ್ದ ಆಂಗ್ಲ ಮ್ಯಾಜಿಸ್ಟ್ರೇಟರು ಕೋರ್ಟಿನ ಗೋಪುರದ ಮೇಲೆ ಕಾಂಗ್ರೆಸ್ ಬಾವುಟ ಹಾರಿಸುತ್ತಿರುವುದನ್ನೂ—ಅದಕ್ಕಾಗಿ ಅಲ್ಲಿ ನೆರೆದಿದ್ದ ಆ ಜನಸಮೂಹವನ್ನೂ ಕಂಡು ಕೋಪದಿಂದ ಉನ್ಮತ್ತರಾದರು. ಕೈಲಿ ಹಿಡಿದಿದ್ದ ಪಿಸ್ತೂಲನ್ನು ಆ ಹುಡುಗನಿಗೆ ಗುರಿಯಿಟ್ಟು 'ಉತರ್‌ಜಾವ್ ಏ ಸುವ್ವರ್‌ಕೆ ಬಚ್ಚೆ !' ಎಂದು ಕೂಗಿಕೊಂಡರು.

ಗೋಪುರಕ್ಕೆ ಧ್ವಜ ಕಟ್ಟುವ ತನ್ನ ಕಾರ್ಯವನ್ನು ಹಾಗೇ ಮುಂದುವರೆಯಿಸುತ್ತ ಕಿಸನ್ ಒಂದು ಕ್ಷಣ ಕೆಳಗಡೆ ದೃಷ್ಟಿ ತೂರಿದ. 'ನೋಡು, ನಿನಗಾಗಿ ಹೊಂಚುಹಾಕಿದ್ದೇನೆ !' ಎಂದು ಆಹ್ವಾನ ಕೊಟ್ಟಿತು ಪಿಸ್ತೂಲು. ಆ ಕೆಂಪುಮುಖದ ಅಧಿಕಾರಿಗಳು-ಪೋಲೀಸರು-ಸೈನಿಕರು-ಅವರ ಬಂದೂಕುಗಳು- ಬರ್ಜಿಗಳು....ಭಯ, ಆಶಂಕೆಗಳಿಂದ ತನ್ನನ್ನೆ ಸಿಟ್ಟಿಸುತ್ತಿದ್ದ ಸಾವಿರಾರು ಜನರ ದೃಷ್ಟಿಗಳು....ಕಿಸನ್ ಕೊಂಚವೂ ಅಳುಕಲಿಲ್ಲ. ಗುಡಿಸಿಲಿನಲ್ಲಿ ತನ್ನ ದಾರಿ ಕಾಯುತ್ತಲಿದ್ದ ಕುರುಡ ತಂದೆಯ ಅಸಹಾಯ ದೀನ ಮುಖ ಒಂದೇ ಒಂದು ಸಲ ಅವನ ಅಂತರ್ದೃಷ್ಟಿಯೆದುರಿಗೆ ಮೂಡಿ ಹೋಯಿತು. ಅಷ್ಟೆ. ತಂದೆಯ ಯೋಚನೆ ಅವನ ಧೃತಿ ಕೆಡಿಸಲಿಲ್ಲ. "ಉತರ್‌ಜಾವ್ ಏ ಸುವ್ವರ್‌ಕೇ ಬಚ್ಚೆ!' ಯಾರೀತ ಈರೀತಿ ನನಗೆ ಹೇಳೋದಕ್ಕೆ ? ನಮ್ಮ ದೇಶ ಇದು... ನಮ್ಮ ಹಿಂದುಸ್ಥಾನ........ನಮ್ಮ ಸ್ವತಂತ್ರ ಹಿಂದುಸ್ಥಾನ....ನಮ್ಮ ಸ್ವತಂತ್ರ ಊರು....ನಮ್ಮ ಕೋರ್ಟಿನ ಕಟ್ಟಡ ಇದು. ನಮ್ಮ ಕಟ್ಟಡದ ಮೇಲೆ ನಾವು ನಮ್ಮ ರಾಷ್ಟ್ರಧ್ವಜ ಹಾರಿಸುತ್ತೇವೆ. ಈತ ಯಾರು ಈ ಕೋತಿ ಮುಖದೋನು ಇಳಿ ಅನ್ನೋಕೆ ನನಗೆ ?' ಎಂದುಕೊಂಡು ದಾರವನ್ನು ಬಿಗಿಯುತ್ತಾ 'ಇಳಿಯೋದಿಲ್ಲ ಹೋಗಲೆ ! ನೀನ್ಯಾವನೋ ಹೇಳೋಕೆ ನನಗೆ ? ನಮ್ಮ ಸೇನಾಪತಿ ಆಜ್ಞೆ ಮಾಡಿದಾರೆ—ರಾಷ್ಟ್ರಧ್ವಜ ಹಚ್ಚು ಅಂತ.' ಎಂದ.

'ಯಾರೋ ಆ ಸೇನಾಪತಿ ? ಒಳ್ಳೇ ಮಾತಿನಿಂದ ಇಳೀತೀಯೋ ಇಲ್ಲವೊ ? ಗುಂಡು ಹಾರಿಸಲೋ ?' ಎಂದು ಗುಡುಗಿದ ಅಧಿಕಾರಿ.

ಆ ಬೆದರಿಕೆಯ ನುಡಿಯಿಂದಾಗಿ ಕಿಸನನ ಸ್ವಾಭಿಮಾನ ಕೆರಳಿ ನಿಂತಿತು. ಮರಿಹುಲಿಯಂತೆ ಗರ್ಜಿಸುತ್ತ ಹೇಳಿದ.

ಗುಂಡು ಮದ್ದು ಅಂತ ಯಾರಿಗೆ ಹೆದರಿಸ್ತೀಯೋ ನೀನು ? ನಿಮ್ಮ ಗುಂಡುಗಳಿಗೆ ಇಂದು ಯಾರೂ ಅಂಜೋದಿಲ್ಲ. ಆ ಕಾಲ ಹೋಯಿತು. ಇಂದು ನಾವು ಸ್ವತಂತ್ರರಾಗಿದ್ದೇವೆ. ನೆನಪಿನಲ್ಲಿಡು. ಹಮ್ ಕರೇಂಗೆ, ಯಾ, ಮರೇಂಗೆ! — ಅಲ್ಲಿದಾರೆ ನೋಡು ನಮ್ಮ ಸೇನಾಪತಿ. ಅವರು ಆಜ್ಞೆ ಕೊಟ್ಟದ್ದರಿಂದ ನಾನು ಧ್ವಜ ಕಟ್ತಿದ್ದೇನೆ. ಅವರು ಹೇಳಿದರೆ ಮಾತ್ರ ಹಾಗೇ ಇಳಿಸ್ತೇನೆ. ಬೇರೆ ಯಾರಪ್ಪ ಹೇಳಿದರೂ ಇಳಿಯೋನಲ್ಲ....'

'ಹೌದು. ನಾನೇ ಹೇಳಿದ್ದೆ ಆತನಿಗೆ. ನಾವೀಗ ನಮ್ಮ ಸ್ವತಂತ್ರ ರಾಜ್ಯ ಸ್ಥಾಪಿಸಿದ್ದೇವೆ. ಈ ತಾಲೂಕಿಗೆ ನನ್ನನ್ನು ಸೇನಾಧಿಕಾರಿಯನ್ನಾಗಿ ನಿಯಮಿಸಿದ್ದಾರೆ. ಈ ಕಟ್ಟಡವನ್ನು ನಾವು ವಶಪಡಿಸಿಕೊಂಡಿದ್ದೇವೆ. ಇದು ನಮ್ಮದು. ಆದ್ದರಿಂದ ನಮ್ಮ ಧ್ವಜ ಹಾರಿಸುತ್ತಿದೇವೆ....' ಎಂದು ಮುಖಂಡ ಹೇಳುತ್ತಿದ್ದಂತೆಯೇ ಆಂಗ್ಲೇಯ ಅಧಿಕಾರಿ 'ಪಕಡೋ ಇಸೆ' ಎಂದು ಸಬ್ ಇನಸ್ಪೆಕ್ಟರಿಗೆ ಆಜ್ಞೆಮಾಡಿ ರೋಷಾವೇಶದಿಂದ ಪಿಸ್ತೂಲನ್ನು ಮತ್ತೆ ಹುಡುಗನ ಕಡೆ ಹೊರಳಿಸಿ —

'ಇಳಿ! ಇಳಿ! ಇಲ್ಲಾಂದ್ರೆ ಸುಟ್ಟು ಬಿಡ್ತೇನೆ!' ಎಂದು ಕಿರಿಚಿಕೊಂಡ.

'ಸುಡು. ಸುಡು. ನಾನೇನೂ ಹೆದರೋಲ್ಲ. ಆದರೆ ಕೊಂಚ ತಡೆ. ಮುಗೀತು ನನ್ನ ಕೆಲಸ....ಮುಗೀತು ನನ್ನ ಕರ್ತವ್ಯ....' ಎನ್ನುತ್ತ ಕಿಸನ್ ಧ್ವಜವನ್ನು ಕಟ್ಟಿ ಮುಗಿಸಿದ. ಬೆಳಗಿನ ಸ್ವಚ್ಛಂದ ಗಾಳಿಯಲ್ಲಿ ಪಟಪಟಿಸುತ್ತ ಹಾರತೊಡಗಿದ ಆ ತ್ರಿವರ್ಣಧ್ವಜವನ್ನೇ ಅರೆಕ್ಷಣ ಪ್ರೀತಿ, ಅಭಿಮಾನಗಳಿಂದ ನಿಟ್ಟಿಸುತ್ತಿದ್ದು — ಅನಂತರ ಅಧಿಕಾರಿಯ ಕಡೆ ದೃಷ್ಟಿ ತೂರಿ 'ಸುಡು ಈಗ' ಎಂದ ದೃಢ ಸ್ವರದಲ್ಲಿ.

'ಎಂಥ ಉದ್ಧಟತನ ಈ ಚೋಟುದ್ದದ ಕರಿಹುಡುಗನಿಗೆ!' ಎಂದುಕೊಂಡಾಗ ಅಧಿಕಾರಿಗೆ ಇನ್ನೂ ರೇಗಿಹೋಯಿತು. 'ಕಿತ್ತುಬಿಸುಟು ಆ ಬಾವುಟವನ್ನ. ಇಲ್ಲಾಂದ್ರೆ ನಿನ್ನನ್ನೂ, ಅವನ್ನೂ ಕೂಡೇ ಸುಡ್ತೇನೆ!' ಎಂದು ಕೂಗಿದ.

'ನನ್ನ ಪ್ರಾಣ ಹೋದರೂ ಚಿಂತೆಯಿಲ್ಲ. ಇಲ್ಲಿಂದ ಇದನ್ನು ಕದಲ ಗೊಡುವುದಿಲ್ಲ!' ಎಂದ ಕಿಸನ್.

ಅಧಿಕಾರಿಗಳಿಗೆ ಪೀಕಲಾಟಕ್ಕಿಟ್ಟುಕೊಂಡಿತು. ಬೆದರಿಕೆಯ ಮಾತು ಗಳಿಂದ ಆ ಹುಡುಗನ ಮೇಲೆ ಯಾವ ಪರಿಣಾಮವೂ ಆಗುವಂತಿಲ್ಲವೆಂ ಬುದು ತಿಳಿಯುತ್ತಲೂ ಕೊಂಚಹೊತ್ತು ಅವರವರಲ್ಲಿಯೆ ಪಿಸುಮಾತು ನಡೆ ಯಿತು. 'ಈಗ ಗುಂಡುಹಾರಿಸೋದು ಬೇಡ. ಉಪಾಯದಿಂದ ಕೆಲಸ ಮಾಡುವುದೇ ಉತ್ತಮ' ಎಂದು ಪೋಲೀಸ್ ಸೂಪರಿಂಟೆಂಡೆಂಟ್ ಸಲಹೆ ಕೊಟ್ಟರೂ ಆಂಗ್ಲೇಯ ಅಧಿಕಾರಿಗೆ ಅದು ರುಚಿಸಲಿಲ್ಲ. ಇಪ್ಪತ್ತುಸಾವಿರ ಹಿಂದೀಯರೆದುರಿಗೆ ಈಗ ತಾನು ಹಿಂದೆಗೆದರೆ ಬ್ರಿಟಿಷ್ ಸಾಮ್ರಾಜ್ಯ ಶಾಹಿಯ ಘನತೆಗೆ ಕುಂದಕವಲ್ಲವೆ? ಈ ಧ್ವಜವನ್ನು-ಅದನ್ನೂ ಕಟ್ಟಿದ ಈ ಉದ್ಧಟ ಹುಡುಗನನ್ನೂ ಹೀಗೇ ಬಿಟ್ಟರೆ ಸೋಲನ್ನೊಪ್ಪಿದ ಹಾಗೇ ಆದೀತು- ಎಂದು ಆತನ ಆಂಗ್ಲಬುದ್ಧಿ ವಾದಿಸಿತು. ಮೊದಲಿನಕಿಂತಲೂ ಹೆಚ್ಚಿನ ದರ್ಪದ ದನಿಯಲ್ಲಿ ಕೂಗಿಕೊಂಡ.

'ಧ್ವಜ ತೆಗೀತೀಯೋ, ಇಲ್ಲಾ ಹೊಡೀಲೋ?'

ಬಾವಿಯಲ್ಲಿ ಮುಳುಗುತ್ತಿದ್ದವರನ್ನು ಸೆಳೆದುಕೊಂಡು ಉಳಿಸುವವರ ಹಾಗೆ ಎರಡು ಕೈಗಳಿಂದಲೂ ಧ್ವಜವನ್ನು ತಬ್ಬಿಕೊಳ್ಳುತ್ತ ಕೂಗಿದ ಕಿಸನ್.

'ನಾನೇನೂ ಬಿಡೋದಿಲ್ಲ ಧ್ವಜಾನ್ನ. ಹೊಡೆದರೆ ಹೊಡಿ!'

ಬೆಂಕಿಯ ಕಿಡಿ ಕಾರುತ್ತ ಹಾರಿತು ಗುಂಡು; ಧ್ವಜವನ್ನಪ್ಪಿಕೊಂಡು ನಿಂತಿದ್ದ ಆ ಆಧುನಿಕ ಅಭಿಮನ್ಯುವಿನ ಹೊಟ್ಟೆಯನ್ನು ಭೇದಿಸಿಕೊಂಡು, ಅಲ್ಲಿನ ಬಿಸಿನೆತ್ತರವನ್ನೀಂಟಿ, ಧ್ವಜದ ಭುಜಕ್ಕೆ ಏಟುಕೊಟ್ಟು ಅಲ್ಲಿ ಕೆಂಬಣ್ಣ ಬಳಿದು ಮುಗಿಲಿನಲ್ಲಿ ಮಾಯವಾಯಿತು.

ಒಂದೇ ಕ್ಷಣ........

ಧ್ವಜ ಹಿಡಿದುಕೊಂಡಿದ್ದ ಹಾಗೇ ಕಿಸನ್ ಶರೀರ ಅದರ ಪಕ್ಕದಲ್ಲೇ ಸೈನಿಕನಂತೆ ಸೆಟೆದುನಿಂತಿತು. ಮುಚ್ಚಿಕೊಳ್ಳುತ್ತಿದ್ದ ಕಣ್ಣು ಕೊನೆಯ ಸಲ ಕೆಳಗಡೆ ನಿಂತಿದ್ದ ಜನಸಮೂಹವನ್ನು ನಿಟ್ಟಿಸಿನೋಡಿತು. ಸೆಳೆದುಕೊಳ್ಳು

ತ್ತಿದ್ದ ನಾಲಗೆ ಅಸ್ಪಷ್ಟವಾಗಿ ಘೋಷಿಸಿತು: 'ಭಾರತಮಾತಾಕೀ ಜೈ!.... ಅಪ್ಪಾ....ಅಪ್ಪಾ....ಬಂದೆ! ಬಂದೆ!'

ಮರುಕ್ಷಣದಲ್ಲೇ....

ಮುಗಿಲಿನಿಂದ ಉರುಳುವ ಚಿಕ್ಕೆಯಂತೆ ಗೋಪುರದಿಂದ ಕೆಳಕ್ಕುರುಳಿತು ಆ ಎಳೆ ಶರೀರ.

ಧ್ವಜ ಮಾತ್ರ ಡಾಲಿನಿಂದ ಗೋಪುರದ ಮೇಲೆ ಹಾರಾಡುತ್ತಿತ್ತು— ಆ ಬಾಲವೀರನ ಬಿಸಿ ರಕ್ತದ ಕುಂಕುಮವನ್ನು ಧರಿಸಿಕೊಂಡು!

ನವಂಬರ್ ೧೯೪೩

## ಹುತಾತ್ಮ

"ಹಸಿವು....ಹಸಿವು....ಬಹಳ ಹಸಿವು ಅಮ್ಮ! ತಾಳಲಾರೆನೇ ಈ ಹಸಿವನ್ನ....ಹೊಟ್ಟೆಯೆಲ್ಲಾ ಬರಿದು....ಏನೂ ಇಲ್ಲವಮ್ಮಾ...ಏನೂ ಇಲ್ಲ.... ಏನೇನೂ ಇಲ್ಲ ಹೊಟ್ಟೆಯೊಳಗೆ. ಏನಾದರೂ ಕೊಡೇ....ಬೇಗ ಕೊಡೇ....

"ಯಾಕಮ್ಮಾ ಹಾಗೆ ಮುಖ ಕೆಳಗೆ ಹಾಕುತೀಯ? ಇಲ್ಲವೇನೆ? ಏನೇನೂ ಇಲ್ಲವೇನೇ? ಒಂದು ತುಂಡು ರೊಟ್ಟಿ? ಒಂದು ತುತ್ತು ಅನ್ನ? ಬಿಸೀದೇ ಬೇಕು ಅಂತೇನೂ ಇಲ್ಲವಮ್ಮಾ....ತಂಗಳಾದರೂ ಸರಿ....ಎಂಜಲಾದರೂ ಸರಿ....ಅಮ್ಮಾ....

"ಅದ್ಯಾಕಮ್ಮಾ ಹಾಗೆ ಕೂತುಕೊಂಡು ಬಿಟ್ಟೆ ಜೋಲು ಮೋರೆ ಮಾಡಿಕೊಂಡು? ಓ! ಗೊತ್ತಾಯಿತು ನನಗೆ. ನೀನೇನನ್ನೂ ಮಾಡಲಾರೆ. ನನ್ನನ್ನುಳಿಸಬೇಕು ಅಂತ ಎಷ್ಟು ಪ್ರಯತ್ನಪಟ್ಟರೂ ನಿನ್ನಿಂದ ಅದು ಸಾಧ್ಯವಿಲ್ಲ. ಅಯ್ಯೋ ನನ್ನ ತಾಯಿ, ನಿಸ್ಸಹಾಯಳು ನೀನು. ಒಂದು ತುತ್ತು ಅನ್ನವನ್ನೂ ದೊರಕಿಸಲಾರೆ....ನಮ್ಮ ಅನ್ನ....

"ಹೋಯಿತು ಎಲ್ಲಾ! ಹಾಳಾಗಿ ಹೋಯಿತು. ಬೂದಿ ಬೂದಿಯಾಗಿ ಹೋಯಿತು. ಆ ಯುದ್ಧ....ಆ ಭೀಕರ ಯುದ್ಧ....ಜಪಾನೀಯರನ್ನ ಓಡಿಸೋದಕ್ಕಾಗಿ ಬಂದರು ಅವರು ನಮ್ಮ ದೇಶಕ್ಕೆ. ಇಂಗ್ಲೀಷರು, ಅಮೆರಿಕನರು, ಆಸ್ಟ್ರೇಲಿಯನ್ನರು, ಕೆನಡಿಯನ್ನರು. ನಮ್ಮ ಅನ್ನವನ್ನೆಲ್ಲಾ ತಿಂದು ಹೋದರು. ಅವರೊಂದಿಗೇ ಹೋಯಿತು ನಮ್ಮ ಅನ್ನ.... ನಮ್ಮ ರೊಟ್ಟಿ....

"ಸೋಲಿಸಿಬಿಟ್ಟರಲ್ಲ ಆ ಜಪಾನರನ್ನ! ಇನ್ನ್ಯಾಕೆ ನಮ್ಮ ಗೊಡವೆ ಇವರಿಗೆ? ಈ ಬಿಳಿಯರಿಗೊಂದು ಗೆಲವಾಗಬೇಕಾದರೆ ನಾವು ಮಾಡಿದ ತ್ಯಾಗ....ಪಟ್ಟಿಸಿದ ಕಷ್ಟ ...ಗೆದ್ದಮೇಲೆ ಯಾರಿಗೆ ನೆನಪಾದೀತೋ ನಮ್ಮ ಸಂಕಟವೆಲ್ಲ? ಅವರು ಗೆದ್ದು ಹೋದರು....ನಾವಿನ್ನೂ ಬಿದ್ದೇ ಇದೇವೆ. ಅವರು ವಿಜಯಿಗಳಾದರು. ನಾವಿನ್ನೂ ಗುಲಾಮರಾಗೇ ಇದೇವೆ. ಗೆದ್ದ ಸಂತಸದಿಂದ ಜೈಸಿ ಮಾಡುತ್ತಿದಾರೆ ಅವರು....ನಾವಿಲ್ಲಿ ಅನ್ನ ಇಲ್ಲವೆ

ಸಾಯ್ತಾ ಬಿದ್ದಿದೇವೆ. ನನ್ನಂಥ ಎಷ್ಟು ಜನ ಸಾಯ್ತಾ ಇದಾರೋ ನಮ್ಮ ಹಿಂದುಸ್ಥಾನದಲ್ಲಿ ?

" ಹಾಗೆಲ್ಲಾ ನೊಂದುಕೋಬೇಡಮ್ಮ ನನ್ನ ಕನವರಿಕೇನ ಕೇಳಿ. ನಾನಾವರೂ ಏನುಮಾತಲಿ ತಾಯಿ? ನನ್ನ ಕನವರಿಕೆ ಅಲ್ಲ ಇದು—ಹಸಿದ ಹೊಟ್ಟೆಯ ಕನವರಿಕೆ. ಹಸಿವಿನ ಕಿಚ್ಚಿನಿಂದ ನನ್ನ ಹೃದಯವೆಲ್ಲಾ ಸುಟ್ಟುಹೋಗಿದೆ. ಬೂದಿ ಬೂದಿಯಾಗಿದೆ. ಅದರಿಂದ ಬುದ್ಧಿಯೂ ಮಂಕಾಗಿದೆ....ಅಯ್ಯೋ....ಹಸಿವು ...ದಾಹ....ನೀರಾದರೂ ಕೊಡವಮ್ಮ.... ಒಂದು ಲೋಟ....ಒಂದೇ ಒಂದು ಲೋಟ....ಅಷ್ಟಾದರೂ ಕತ್ತಿನಲ್ಲಿಳಿದರೆ ಕೊಂಚ ಸಮಾಧಾನವಾದೀತೇನೊ....ನೀರು....ನೀರು....

" ಯಾಕಮ್ಮಾ ಹಾಗೆ ಹಣೆ ಹಣೆ ಬಡಿದುಕೊಳ್ಳುತೀಯಾ ? ನೀರೂ ಇಲ್ಲವೇ ಮನೇಲಿ? ಒಂದು ಗುಟುಕು ನೀರೂ ? ಏನೆಂದೆ ? ಮಳೆ ಬೀಳಲೇ ಇಲ್ಲವೆ ? ಕೆರೆಯಲ್ಲಿ ನೀರೇ ಇಲ್ಲವೆ? ಬಾವಿಯಲ್ಲಿ? ಅಲ್ಲೂ ಇಲ್ಲವೆ? ಮೂರು ಮೈಲು ದೂರಹೋಗಿ ಹೊತ್ತು ತರಬೇಕಾಗಿ ಬಂತೇ ನೀರನ್ನ ? ಗೊತ್ತಾಯ್ತಮ್ಮ, ಗೊತ್ತಾಯ್ತು ಬಿಡು, ನೀ ಹೇಳಬೇಕಾಗೇ ಇಲ್ಲ. ಮೂರು ಮೈಲು ನಡೆದು ಬರುವುದಕ್ಕೂ ಸಹ ತ್ರಾಣಬೇಕಲ್ಲ ನಿನ್ನ ಮೈಯಲ್ಲಿ ? ಹೊಟ್ಟೆಗಿದ್ದರೆ ತಾನೆ ಶಕ್ತಿ ಬಂದೀತು ? ವಯಸ್ಸಾದರೂ ಕಡಮೇನೆ ? ಐವತ್ತಾಗ್ತಬಂತು. ಇಪ್ಪತ್ತೈದರ ಹರಯದ ಹುಡುಗ ನಾನು. ನಾನೇ ಹೀಗಾಗಿಬಿಟ್ಟೆ. ಇನ್ನು ಐವತ್ತರ ಮುದುಕಿ ನೀನು ಹೇಗಾಗಬೇಡ ? ಆದರೂ....ನೀರು....ನೀರು....ನೀರು....ಹಸಿವು....ಹಸಿವು....ಅಯ್ಯೋ, ಈ ಸಂಕಟ....ಈ ಬಾಧೆ....ಎಂಥಾ ಮರ್ಗಶಿಕ್ಷೆಬಂತಮ್ಮಾ ಹಿಂದುಸ್ಥಾನಕ್ಕೆ ?

"ಈ ದುಃಸ್ಥಿತಿಯಲ್ಲೂ ಒಂದು ಸಂತೋಷ ಅನ್ನು. ಕಾಂಗ್ರೆಸ್ ಮಂತ್ರಿ ಮಂಡಲ ಬಂತಲ್ಲ....ಗಾಂಧೀರಾಜ್ಯ ಬಂತಲ್ಲ.... ಇನ್ನುಮುಂದೆ ನಮಗೆಲ್ಲಾ ಒಳ್ಳೆಯ ದಿನ ಬಂದಾವೇನೊ. ಎಷ್ಟು ದಿನಗಳಿಂದ ಕಾಯುತ್ತಿದ್ದೆವಮ್ಮ ಇಂಥ ಸಮಯಕ್ಕಾಗಿ.....ಸ್ವಾತಂತ್ರ್ಯದ ಸಮಯಕ್ಕಾಗಿ.....ಬಂತೇನೇ ಸ್ವಾತಂತ್ರ್ಯ ? ಅಯ್ಯೋ, ಬಂತೇ ? ಬೇಗನೆ ಹೇಳಮ್ಮಾ....ತಾಳಲಾರೆ.... ಫಲ ದೊರೆಯಿತೇನೇ ಆಗಸ್ಟ್ ಕ್ರಾಂತಿಗೆ ?

" ಆ ಕ್ರಾಂತಿಯನ್ನು ಕುರಿತು ಮಾತಾಡಿದರೇ ಗೃಹ ಮಂತ್ರಿಗಳು ? ನಿಜಕ್ಕೂ ? ಏನೆಂದರೇ ಅವರು ? ಆಗಸ್ಟ್ ಕ್ರಾಂತಿಯನ್ನು ಯಶಸ್ವಿಯಾಗಿ ಮಾಡೋದಕ್ಕಾಗಿ ರಕ್ತ ಸುರಿಸಿದ ವೀರರನ್ನ ಸ್ಮರಿಸಿದರೆ ? ಮನೆ ಮಾರು, ಆಸ್ತಿ ಪಾಸ್ತಿಗಳನ್ನೆಲ್ಲ ಕಳೆದುಕೊಂಡು, ಸರ್ಕಾರದ ದಬ್ಬಾಳಿಕೆಯನ್ನೆಲ್ಲ ಧೈರ್ಯದಿಂದ ಎದುರಿಸಿದ ಬಡರೈತರನ್ನ ನೆನಸಿದರೆ ? ಪೋಲೀಸರ ಕಣ್ಣಿಗೆ ಮಂಕು ಬೂದಿಯೆರಚಿ ಅಜ್ಞಾತವಾಸದಲ್ಲಿದ್ದು ಯುದ್ಧ ಸಾಗಿಸಿದ ಸ್ವಾತಂತ್ರ್ಯದ ಸೈನಿಕರನ್ನ ವಂದಿಸಿದರೆ ? ಪೋಲೀಸರ ಗುಂಡಿಗೆ ಬಲಿಯಾಗಿ ಪ್ರಾಣಬಿಟ್ಟವರನ್ನು, ಲಾಠೀ ಏಟು ತಿಂದು ಅಂಗ ಹೀನರಾದವರನ್ನು, ತಲೆಯೊಡೆದುಕೊಂಡವರನ್ನು, ಗಾಯಗೊಂಡು ನರಳಿದವರನ್ನು, ಮಕ್ಕಳನ್ನು ಕಳೆದುಕೊಂಡ ತಾಯಂದಿರನ್ನ, ಗಂಡನನ್ನು ಕಳೆದುಕೊಂಡ ಅಬಲೆಯರನ್ನು, ಅನಾಥರನ್ನು, ಜೈಲಿನಲ್ಲಿ ನರಕಯಾತನೆ ಅನುಭವಿಸಿದ ಸತ್ಯಾಗ್ರಹಿಗಳನ್ನು ಜ್ಞಾಪಿಸಿಕೊಂಡರೇ ? ಅವರಿಗಾಗಿ ಏನನ್ನಾದರೂ ಮಾಡುತ್ತೇನೆಂದರೆ ? ಹೇಳು. ಕಾಂಗ್ರೆಸ್ ಮಂತ್ರಿ ಅವರು ನಮ್ಮ ಬಂಧು-ನಮ್ಮ ಬಳಗ-ನಮ್ಮ ರಕ್ತ-ನಮ್ಮವರೇ ಅವರು....ನಮ್ಮೊಂದಿಗೇನೆ ಸೆರೆಮನೆವಾಸ ಮಾಡಿದವರೆ....ಶಿಕ್ಷೆ ಅನುಭವಿಸಿದರೆ....ಅವರು 'ಎ' ಕ್ಲಾಸಿನಲ್ಲಿದ್ದರೇನಾಯಿತು ? ನಾವು 'ಸಿ' ಕ್ಲಾಸಿನಲ್ಲಿದ್ದರೇನಾಯಿತು ? ಸೆರೆಮನೆ ಹೇಗೂ ಸೆರೆಮನೆಯೇ. ಅಲ್ಲಿನ ನರಕ ಜೀವನ....ಆ ಅತ್ಯಾಚಾರ....ಆ ಸಂಕಟ...

" ಆ ಘೋರ ನರಕದಲ್ಲಿ ನರಳಿ ನರಳಿ, ಔಷಧಕ್ಕೂ ಗತಿಯಿಲ್ಲದೆ ಕೊಳೆತುಕೊಳೆತು ಈ ಹಾಳು ರೋಗ ಬಡಿದುಕೊಂಡಿತು ನನಗೆ. ಔಷಧ ಕೊಡಿರೋ, ಸಾಯ್ತಾಇದ್ದೇನೆ-ಅಂತ ಗಂಟಲು ಹರಿಯೋ ಹಾಗೆ ಕಿರಿಚಿಕೊಂಡರೂ ಸಹ ಯಾವುದೋ ಒಂದು ಬಣ್ಣದ ನೀರು ಕೊಟ್ಟು ಹಲ್ಲು ಕಿರಿದು ಹೊರಟು ಹೋಗ್ತಿದ್ದ ಆ ಡಾಕ್ಟರ್. ಬ್ರಿಟಿಶರವನೇನೂ ಅಲ್ಲಮ್ಮ ಆತ. ಅವನೂ ನಮ್ಮವನೇ. ಹಿಂದೂಸ್ಥಾನದವನೇ. ಕರ್ನಾಟಕದವನೇ. ಬೆಳಗಾಂವಿ ಜಿಲ್ಲೆಯವನೇ. ಆದರೂ ಆ ಡಾಕ್ಟರ್ ಕುಲಕರ್ಣಿಗೆ ಕರುಣೆ ಅನ್ನೋದಿತ್ತೇ? ಸಿ ಕ್ಲಾಸ್ ಕೈದಿಗಳಾದ ನಮ್ಮನ್ನ ಕಂಡರಂತೂ ಮೂಗು ಮುರಿದು ಹೊರಟು ಹೋಗುತ್ತಿದ್ದ ಆತ. ಆ ಡಾಕ್ಟರ್....

ಆ ಜೇಲರ್....ಆ ಸೂಪರಿಂಟೆಂಡೆಂಟ್....ಆ ಹಿಂಡಲಗಿ ಜೇಲ್....ಅಲ್ಲಿನ ಹುಳತುಂಬಿದ ಪಲ್ಯ....ಹೊಲಸು ನಾರುವ ರೊಟ್ಟಿ....ಕಲ್ಲುಕೂಡಿದ ಅನ್ನ.... ರೋಗ ಬರೋದೇನೂ ದೊಡ್ಡದಲ್ಲಮ್ಮ ಅಂಥ ನರಕದಲ್ಲಿ. ಸಾವು ಬರಲಿಲ್ಲ ಪಲ್ಲಾ....ಅದೇ ಹೆಚ್ಚಿನದು....

"ನನ್ನ ಸಾವು ತಪ್ಪಿಸಿದ ಅಂತ ಕೈ ಮುಗೀಬೇಡಮ್ಮ ಆ ದೇವರಿಗೆ. ಈ ರೀತಿಯಲ್ಲಿ ಬದುಕಿಸಿಡೋದಕ್ಕಿಂತ ಸಾಯಿಸಿಬಿಡೋದೇ ಮೇಲು. ಈ ರೋಗ....ಈ ನರಳಾಟ....ಈ ಹಸಿವು....ಈ ಸಂಕಟ....ಇದನ್ನೆಲ್ಲಾ ಕಂಡರೆ ಸಂತೋಷವೇನಮ್ಮ ನಿನ್ನ ಆ ದೇವರಿಗೆ ? ಪರಕೀಯರ ಗುಲಾಮರಾಗಿ ಜೈಲಿನಲ್ಲಿ ಕೊಳೆತು ಯಾವ್ಯಾವದೋ ರೋಗ ಹಚ್ಚಿಕೊಂಡು, ಅನಂತರ ಹೊಟ್ಟೆಗಿಲ್ಲದೆ ನರಳಿ ನರಳಿ ಎಲುಬು ಎಲುಬಾಗಿ ಜೀವಬಿಡುವ ನನ್ನಂಥ ಬಡವರನ್ನ ಕಂಡು ಆನಂದದಿಂದ ನಗ್ತಾನೇನಮ್ಮಾ ಆ ದೇವರು ? ಆ ರಾಮ ? ಆ ಕೃಷ್ಣ ? ಆ ಶಿವಶಂಕರ ? ಆ ಶ್ರೀಮನ್ನಾರಾಯಣ ? ಆ ಮೂವತ್ತಮೂರು ಕೋಟಿ ದೇವತೆಗಳು ? ಅವರೂ ನಗ್ತಾರೇನಮ್ಮ ನಮ್ಮ ಸ್ಥಿತಿಯನ್ನ ಕಂಡು ? ಈ ನಲವತ್ತುಕೋಟಿ ಜನ ಹುಳುಗಳಂತೆ ಸಾಯೋದನ್ನ ನೋಡಿ ಹೊಟ್ಟೆ ಹುಣ್ಣಾಗುವಂತೆ ನಗ್ತಾರೇನಮ್ಮಾ ಅವರೆಲ್ಲಾ ?

"ಅಯ್ಯೋ, ಎಲ್ಲೋ ಒಂದು ಹುಚ್ಚು ನಿನಗೆ. ಬರೀ ಒಂದು ಭ್ರಮೆ. ಏನೋ ಮಾಯಾಜಾಲ. ದೇವರು...ಪರಮಾತ್ಮ....ಶಂಕರ.... ನಾರಾಯಣ....ಎಲ್ಲರನ್ನೂ ಕಾಪಾಡುವ ಭಗವಂತ....ಸುಳ್ಳು ...ಸುಳ್ಳು.... ಎಲ್ಲಾ ಸುಳ್ಳು....ಅಪ್ಪಟ ಸುಳ್ಳು....ಶುದ್ಧ ದಾಂಭಿಕತನ...ಎಲ್ಲರನ್ನು ಕಾಪಾಡುವ ಆ ದೇವರು ಎಲ್ಲಿ ಓಡಿಹೋಗಿದ್ದಾನೆ ಈಗ ? ಹೇಳು. ಉತ್ತರ ಕೊಡು. ಎಲ್ಲಿ ಅಡಗಿಕೊಂಡಿದ್ದಾನೇ ಆ ಸರ್ವರಕ್ಷಕ ಭಗವಂತ ? ಕುರುಡಾಗಿವೆಯೇನೇ ಅವನ ಕಣ್ಣು ? ಕಿವುಡಾಗಿವೆಯೇನೇ ಅವನ ಕಿವಿ ? ಕಲ್ಲಾಗಿದೆಯೇನೇ ಅವನ ಹೃದಯ ? ಈ ಕೋಟಿ ಕೋಟಿ ಜನರ ನರಳಾಟ, ಚೀರಾಟ, ಹಸಿವೆಯ ಸಂಕಟ, ಸಾವಿನ ನರ್ತನ, ಈ ಯುದ್ಧ, ಈ ರಕ್ತಪಾತ, ಅಟಂಬಾಂಬ್, ನಾಗಾಸಾಕಿ, ಹಿರೋಶಿಮಾ, ಅಲ್ಲಿ ನಡೆದ ಪಿಶಾಚ ಹಿಂಸೆ, ನಮ್ಮ ದೇಶದಲ್ಲೇ ನಡೆದ ಭಾರಿ ದುರಂತ, ಬಂಗಾಲ, ಬಿಜಾಪುರ, ಕೇರಳ, ಈಗ ಇಡೀ ಹಿಂದುಸ್ಥಾನ...ಬರಗಾಲ ಮಾರಿ ..ಅನ್ನಾಭಾವ.. ನೀರಿನ

ಕೊರತೆ.. ಕೂಳಿನ ಕೊರತೆ...ಎಲ್ಲಿದ್ದಾನೇ ಆ ದೇವರು? ಏನು ಮಾಡು ತ್ತಿದ್ದಾನೆ? ನಾವೆಲ್ಲಾ ಹೀಗೆ ಸಾಯುತ್ತಿರುವಾಗ ಆತ ಎಲ್ಲಿ ಕುಳಿತು ಏನು ಲೀಲೆ ನಡೆಸಿದ್ದಾನೆ? ಶೇಷಶಯ್ಯೆಯ ಮೇಲೊರಗಿಕೊಂಡು ಲಕ್ಷ್ಮಿಯೊಂದಿಗೆ ಲಲ್ಲೆವಾತು ನಡಸಿದ್ದಾನೇನೇ? ಹದಿನಾರುಸಾವಿರ ಗೋಪಿಯರೊಂದಿಗೆ ಪ್ರಣಯಕೇಳಿ ನಡಸಿದ್ದಾನೇನೇ? ಇಲ್ಲ...ಗೌರಿಯೊಬ್ಬಳೇ ಸಾಕಾಗದೆ ಗಂಗೆಯೊಂದಿಗೆ ಕಳ್ಳ ಪ್ರಣಯ ನಡಸಿದ್ದಾನೇ? ಎಲ್ಲಿದ್ದಾನೇ ಆ ದೇವರು? ಆ ಕಾಣದ ದೇವರಿಗ್ಯಾಕೆ ಕೈಮುಗಿಯುತ್ತೀ? ಈ ಇಲ್ಲದ ದೇವರನ್ನು ನಂಬಿಕೊಂಡೇ ಈ ಗತಿ ಬಂತು ಹಿಂದುಸ್ಥಾನಕ್ಕೆ. ಹಾಳಾಯಿತು ನಮ್ಮ ಆತ್ಮವಿಶ್ವಾಸ...ನಮ್ಮ ಪೌರುಷ...ನಮ್ಮ ಶಕ್ತಿ...ನಮ್ಮ ಬಾಹುಬಲ... ದೇವರಿದ್ದಾನೆ ಮೇಲೆ, ನಮ್ಮನ್ನೆಲ್ಲಾ ಕಾಪಾಡುತ್ತಾನೆ—ಎಂದು ಕಣ್ಣು ಮುಚ್ಚಿ ಕೂತುಕೊಂಡೆವು. ಕಾಪಾಡಿದ ನೋಡು ಆ ದೇವರು...ಬ್ರಿಟಿಷರಿಗೆ ನಮ್ಮನ್ನು ಪಸಾಯನದಾನ ಮಾಡಿಬಿಟ್ಟ...ನಾವು ಗುಲಾಮರಾದೆವು. ಬಿಕಾರಿಗಳಾದೆವು. ಭೀಕರ ಸಂಕಟಗಳನ್ನನುಭವಿಸಿದೆವು. ನರಕವಾಯಿತು ನಮ್ಮ ಭಾರತ. ಸ್ವರ್ಗದಲ್ಲಿನ ಆ ದೇವರನ್ನು ನಂಬಿಕೊಂಡು ನರಕವಾ ಯಿತು ನಮ್ಮ ಭಾರತ...

"ಕೈ ಮುಗೀಬೇಡ ಅವನಿಗೆ. ಹಾಳಾಗಲಿ ಆ ದೇವರು...ಹಾಳಾಗಲಿ ಆ ದೇವಿಯರು...ಇಂದು ಭಾರತವೇ ನಮಗೆ ದೇವರು. ಭಾರತಿಯೇ ನಮ್ಮ ದೇವಿ! ಹಸಿದ ಹೊಟ್ಟೆಯಿಂದಲೇ ನಾವು ಅವಳನ್ನು ಪೂಜಿಸಬೇಕು. ನಮ್ಮ ಹೃದಯದ ಭಕ್ತಿಯನ್ನೇ ಅವಳಿಗೆ ಅರ್ಪಿಸಬೇಕು. ನಮ್ಮ ಜೀವವನ್ನೇ ಅವಳಿಗೊಪ್ಪಿಸಬೇಕು ಆಕೆಗಾಗೇ ನಮ್ಮ ಬಾಳು.... ನಮ್ಮ..ಜೀವ. .ನಮ್ಮ ಸರ್ವಸ್ವ. ಸ್ವತಂತ್ರವಾದಳೇನಮ್ಮ ತಾಯಿ ಭಾರತಿ? ಇಂದೇ ಈ ಸುದ್ದಿ ಬರಲಿ. ಸಂತೋಷದಿಂದ ಪ್ರಾಣ ಬಿಟ್ಟೇನು ನಾನು. 'ಸ್ವತಂತ್ರ ಭಾರತಕೀ ಜೈ' ಅಂತ ಹೇಳುತ್ತಾ ನಗುನಗುತ್ತಾ ಪ್ರಾಣ ಬಿಟ್ಟೇನು. ಹೇಳು, ಸುಮ್ಮನೇಕೆ ಕೂತಿದ್ದೀಯಾ? ಮಾತನಾಡು. ನನಗೆ ರೊಟ್ಟೀನೂ ಬೇಡ. ಅನ್ನಾನೂ ಬೇಡ. ನೀರೂ ಬೇಡ. ಒಂದೇ ಒಂದು ಸುದ್ದಿ ನನ್ನ ಕಿವಿಗೆ ಬಿದ್ದರೆ ಸಾಕು. 'ಭಾರತ ಸ್ವತಂತ್ರವಾಯಿತು.' ಅಂತ ಯಾರಾದರೂ ಹೇಳಿದರೆ ಸಾಕು. ಅಷ್ಟೆ ಸಮಾಧಾನ ನನಗೆ.

ನನ್ನದೆನ್ನುವದೇನೂ ಉಳೀಲಿಲ್ಲ ಇಲ್ಲಿ. ಈ ಗುಡಿಸಿಲನ್ನ ಬಿಟ್ಟು, ಈ ಗಡಿಗೆ ಮಡಕೆಗಳನ್ನ ಬಿಟ್ಟು. ಈ ಗೋಡೆಮೇಲೆ ನೇತಾಡುತ್ತಿರುವ ಈ ಗಾಂಧೀ ಪಟವನ್ನ ಬಿಟ್ಟು. ಇನ್ನೆಲ್ಲವನ್ನು ಜಪ್ತಿಮಾಡಿದರು ಆ ಬ್ರಿಟಿಷ್ ಸರ್ಕಾರದವರು. ಹೊಲ ಕಿತ್ತುಕೊಂಡರು...ತೋಟ ಕಿತ್ತುಕೊಂಡರು. ದನಕರುಗಳನ್ನ ಲಿಲಾವು ಮಾಡಿಬಿಟ್ಟರು. ನೇಗಿಲು, ರಂಟೆ, ಕುಂಟೆ, ಬಂಡಿಗಳನ್ನೂ ಮಾರಿಬಿಟ್ಟರು. ದೊಡ್ಡದಾದ ಮನೆಯನ್ನೂ ಲಿಲಾವು ಮಾಡಿದರು. ಪೀಡಿಸಿ ಪೀಡಿಸಿ ಅಪ್ಪನ ರಕ್ತ ಹೀರಿದರು. ನಿನ್ನನ್ನೂ ಈ ಗತಿಗೀಡು ಮಾಡಿದರು. ಏನುಳಿಯಿತವ್ಮಾ ನನ್ನದು ಅನ್ನೋದು? ಏನೂ ಇಲ್ಲ...ಏನೇನೂ ಇಲ್ಲ. ನಿನ್ನೊಬ್ಬಳನ್ನು ಬಿಟ್ಟು. ಈ ಪ್ರೀತಿಯ ನೆಲವನ್ನು ಬಿಟ್ಟು...ನಾ ಹುಟ್ಟಿದ ಈ ಮಣ್ಣನ್ನು ಬಿಟ್ಟು...

"ಆಗಸ್ಟ ಗಲಭೆಯಲ್ಲಿ ಜಪ್ತಿಯಾದ ವಸ್ತುಗಳನ್ನ ಕೊಡೋದಿಲ್ಲಾಂದರೇ ಗೃಹಮಂತ್ರಿಗಳು! ನಂಬಲಾರೆ ನಾನು. ಹೇಗೆ ತಾನೆ ನಂಬಬಹುದಮ್ಮಾ? ನಮ್ಮ ಮಂತ್ರಿ? ಕಾಂಗ್ರೆಸ್ ಮಂತ್ರಿ? ಸ್ವಾತಂತ್ರ್ಯದ ಮಂತ್ರಿ? ಹೀಗೆ? ಈ ರೀತಿ ಹೇಳಿದರೇ?—ಕಳೆದುಕೊಂಡ ವಸ್ತುಗಳು ಮರಳಿ ದೊರೆಯುತ್ತವೆ ಅಂತ ಆಸೆಯಿಟ್ಟುಕೊಂಡು ಆಗ ಯಾರೂ ತ್ಯಾಗ ಮಾಡಲಿಲ್ಲ—ಅಂದರೇ ಮಂತ್ರಿಗಳು? ನಿಜ ಕಣಮ್ಮಾ ಅವರಂದದ್ದು. ನಾವು ಕಳೆದುಕೊಂಡದ್ದು ಮತ್ತೆ ಸಿಕ್ಕೀತು ಅಂತ ನಾವ್ಯಾರೂ ತ್ಯಾಗ ಮಾಡಲಿಲ್ಲ. ನಿಜ...ನಿಜ...ನೂರುಪಾಲಿಗೂ ನಿಜ...ದೇಶದ ಸ್ವಾತಂತ್ರ್ಯದ ಮುಂದೆ ನಮ್ಮ ನಮ್ಮ ವೈಯಕ್ತಿಕ ಬಾಳು ಏನು ದೊಡ್ಡದು? ನಮಗಾರಿಗೂ ಆ ಕ್ಷುದ್ರ ಆಸೆಯಿರಲಿಲ್ಲ. ನಿಜ. ಆದರೆ...ಈ ಮಂತ್ರಿಯಾದವ ನಮಗದನ್ನು ಹೇಳಬೇಕಾಗಿರಲಿಲ್ಲ. ಹೇಳಿ ಈ ರೀತಿ ನಮ್ಮ ಅವಮಾನ ಮಾಡಬೇಕಾಗಿರಲಿಲ್ಲ. ಹಿಂದಿನ ಸರ್ಕಾರ ಜಪ್ತಿಮಾಡಿದ್ದನ್ನು ಕೊಡೋ ಇಚ್ಛೆಯಿದ್ದರೆ ಸುಮ್ಮನೆ ಕೊಟ್ಟು ಬಿಡಬೇಕಿತ್ತು. ಈ ರೀತಿ ತ್ಯಾಗದ ವ್ಯಾಖ್ಯಾನ ಹೊಡೆದು ನಮ್ಮ ಕರುಳಿಗೆ ಚೂರಿ ಹಾಕಬೇಕಾಗಿರಲಿಲ್ಲ.

"ಕಾಂಗ್ರೆಸಿನವರಲ್ಲೂ ಇಂಥ ಮಂತ್ರಿಗಳಿರುವರೇನಮ್ಮಾ? ಇವರೇ ನಮ್ಮ ಸ್ವಾತಂತ್ರ್ಯ ಸಂಪಾದಿಸುವವರು? ಹೃದಯವಾದರೂ ಇದೆಯೋ ಇಲ್ಲೋ ಇವರಿಗೆ? ಈ ಗೃಹಮಂತ್ರಿ? ಯಾರು ಆತ? ಶ್ರೀನಿವಾಸ

ಜಮೀನುದಾರರ ಪೈಕಿ ಅಂತ ಕಾಣುತ್ತೆ. 'ಏಕ್ಲಾಸ್' ನಲ್ಲಿದ್ದವರೇನು ಜೈಲಿನಲ್ಲಿ? ಸರಿ...ಸರಿ ನಮ್ಮಂಥ ಬಡವರ ತ್ಯಾಗದ ಕಲ್ಪನೆ ಈ ಶ್ರೀಮಂತರಿಗೆಲ್ಲಿ ಬಂದೀತು? 'ಏ ಕ್ಲಾಸ್'ನಲ್ಲಿದ್ದು ಸುಖವಾಗಿ ಊಟ ಹೊಡೆದು ಚಳವಳಿ ನಿಲ್ಲುತ್ತಲೂ ಮಂತ್ರಿಗಳಾಗಿ ಮೆರೆಯುವವರು ತಾನೇ ಅವರು? ಸ್ವಾತಂತ್ರ್ಯದ ಹೋರಾಟದಲ್ಲಿ-ನಾವು-ಬಡವರು ಪಟ್ಟ ಕಷ್ಟದ ವಿಚಾರ ಅವರಿಗೇನು ತಿಳಿದೀತು? ಮನೆಮಾರುಗಳನ್ನೆಲ್ಲ ಕಳೆದುಕೊಂಡು, ಆಗಸ್ಟ್ ಕ್ರಾಂತಿಯನ್ನು ಯಶಸ್ವಿಯಾಗಿ ಮಾಡಲು ವರ್ಷಗಳ ಕಾಲ ಹೋರಾಡಿ, ಅನಂತರ ಜೈಲಿನಲ್ಲಿ ಕೊಳೆತು ರೋಗ ಹಚ್ಚಿಕೊಂಡು, ಬಿಡುಗಡೆಯಾಗಿ ಬರುತ್ತಲೂ ಕೇಳುವವರೇ ಗತಿಯಿಲ್ಲದೆ ಈ ಗುಡಿಸಿಲಲ್ಲಿ....ಅನ್ನ ಇಲ್ಲದೆ, ನೀರಿಲ್ಲದೆ ಸಾಯುತ್ತಾಬಿದ್ದಿರುವ ನಾನು — ನನ್ನಂಥ ಕೋಟ್ಯಾವಧಿ ಬಡಜನ-ಇವರ ಸಂಕಟ ಏನು ತಿಳಿದೀತು ಆ ಮಂತ್ರಿಗೆ? ನಮ್ಮವರೇ ಆದರೂ ನಮ್ಮವರಲ್ಲ ಅವರು. ನಾವು ಬೇರೆ. ಅವರು ಬೇರೆ. ನಾವು ಬಡವರು. ಅವರು ಶ್ರೀಮಂತರು. ನಾವು ದುಡ್ಡಿಲ್ಲದವರು. ಅವರು ದುಡ್ಡಿದ್ದವರು. ನಮ್ಮ ಸ್ಥಿತಿಗತಿ ಅವರಿಗೆ ತಿಳಿಯಲಾರದು. ಅಂತೇ ಈ ರೀತಿ ಮಾತನಾಡುತ್ತಾರೆ. ನಮ್ಮವರೇ ಮಂತ್ರಿಗಳಾಗಬೇಕು. ಬಡವರ ಕುಲದಲ್ಲಿ ಹುಟ್ಟಿ ಅವರ ಕಷ್ಟನಷ್ಟಗಳೇನೆಂಬುದನ್ನು ಅನುಭವದಿಂದ ಅರಿತವರೇ ಅಧಿಕಾರ ವಹಿಸಬೇಕು. ಆಗ ನಮ್ಮ ರಾಜ್ಯವಾದೀತು.....

"ಎಂದು ಬರುತ್ತದೆಯೇ ಅಮ್ಮಾ, ಅಂಥ ರಾಜ್ಯ? ಎಲ್ಲರೂ ಯಾವ ಭೇದವೂ ಇಲ್ಲದೆ ಸುಖಸಂತೋಷದಿಂದಿರುವ ರಾಜ್ಯ? ಬಡವರು, ಶ್ರೀಮಂತರು ಎನ್ನುವ ಭೇದ ತೊಲಗಿಹೋಗಿ ಎಲ್ಲರೂ ಸ್ವತಂತ್ರವಾಗಿ, ಸಮಾನರಾಗಿ ಇರುವ ರಾಜ್ಯ? ಅಲ್ಲ ತಾಯಿ. ರಾಮರಾಜ್ಯದ ಮಾತು ಹೇಳಬೇಡಮ್ಮ. ನಮಗೆ ಬೇಕಾದದ್ದು ನಮ್ಮ ರಾಜ್ಯ. ಜನತಾ ರಾಜ್ಯ. ಸಮತಾರಾಜ್ಯ. ಇಲ್ಲವಾದರೆ ಈ ಕಾಂಗ್ರೆಸ್ ಮಂತ್ರಿಗಳ ರಾಜ್ಯ! ಅನ್ನ ನೀರಿಲ್ಲದೆ ಸಾಯುತ್ತಾ ಇದೇವೆ ನಾವಿಲ್ಲಿ....ಮುಂಬಯಿಯಲ್ಲಿ ಕೂತುಕೊಂಡು ಬಾಯಿಗೆ ಬಂದ ಹಾಗೆ ಮಾತಾಡುವ ಅವರಿಗೆ ನಮ್ಮ ಅರಿವಿದೆಯೆ? ನಾವು ಸಾಯುತ್ತಿರುವುದರ ನೆನಪಿದೆಯೆ? ಅನ್ನ ನೀರಿನ ತೊಂದರೆ ತೊಲಗಿ ಹೋದದನ್ನ ಮರೆತುಬಿಟ್ಟು ತ್ಯಾಗದ ಬಗ್ಗೆ ವ್ಯಾಖ್ಯಾನ ಕೊಡ್ತಾ ಇದಾರೆ

ಇವರ ವ್ಯಾಖ್ಯಾನ ಮುಗಿಯುವದರೊಳಗಾಗಿ ಇಲ್ಲಿ ಬಡವರ ಪ್ರಾಣ ಹೋಗುತ್ತದೆ. ಹಿಂದೆ ವಿಜಾಪುರದಲ್ಲಿ ಬಂದ ಬರಗಾಲ ಇಂದು ಕರ್ನಾಟಕದಲ್ಲೆಲ್ಲಾ ಪಸರಿಸಿಬಿಟ್ಟಿದೆ. ಹುಣಿಸೇಹಣ್ಣು ಕೂಡಾ ಸಿಕ್ಕುತ್ತಿಲ್ಲ ಹೊಟ್ಟೆಗೆ. ಈ ರೀತಿ ಸಾಯೋ ಜನರನ್ನ ಉಳಿಸೋ ಕೆಲಸ ಮರೆತು ಅವರನ್ನಣಕಿಸಿ ಅವ ಹೇಳನೆ ಮಾಡೋ ಉಪದ್ವ್ಯಾಪ ಮಾಡಬೇಕೇ ಇವರು ? ನಮ್ಮ ಮಂತ್ರಿಗಳು ? ನಮ್ಮ ಪ್ರೀತಿಯ ಕಾಂಗ್ರೆಸಿನ ಹೆಸರಿನಿಂದ ಅಧಿಕಾರಕ್ಕೆ ಬಂದ ಮಂತ್ರಿಗಳು ? ಇವರು ಮಂತ್ರಿಗಳಾಗಲು ನಾವು ಮಾಡಿದ ತ್ಯಾಗ....ಸುರಿಸಿದ ರಕ್ತ....ಸಹಿಸಿದ ಕಷ್ಟ....

—" ದಾಹ.....ದಾಹ....ದಾಹೆ....ಹಸಿವು.. .ಹಸಿವು....ಅಮ್ಮಾ ! ಮುಖ ಮೇಲಕೆತ್ತು ನನ್ನವ್ಮಾ...ಏನು ಹಸಿವೆ ಇದು...ಎಂಥಾ ದಾಹೆ ಇದು. ಕಟ್ಟಿ ಹೋಗ್ತಾಯಿದೆ ಉಸಿರು. ನಿನ್ನ ಮೊಲೆಯನ್ನಾದರೂ ನನ್ನ ಬಾಯಿಗಿಡು. ಒಂದು ತೊಟ್ಟು ಹಾಲಾದರೂ ಬರುತ್ತೇನೋ ನೋಡುವ...ಇಲ್ಲವೆ ? ಅದೂ ಸಾಧ್ಯವಿಲ್ಲವೆ ? ಬತ್ತಿ ಒಣಗಿ ಹೋಗಿದೆಯೆ ನಿನ್ನ ಮೊಲೆ ? ಅಯ್ಯೋ, ಎಂಥ ಮೂರ್ಖ ನಾನು ! ಇಷ್ಟೂ ತಿಳೀಬಾರದೇ ನನಗೆ ? ಐವತ್ತು ವರ್ಷದ ಮುದುಕಿ...ಇಪ್ಪತ್ತೈದು ವರ್ಷದ ಮಗ... ಮೊಲೆಹಾಲು ! ಎಂಥ ಅವಿವೇಕದ ಯೋಚನೆ...

" ಆದರೇನಮ್ಮಾ ಮಾಡಲಿ ? ಹಸಿವು...ಹಸಿವು...ದಾಹೆ...ದಾಹ... ತಾಳಲಾರೆನೇ ಈ ಸಂಕಟವನ್ನ. ಹೋಯಿತು ಜೀವ...ಇಲ್ಲ...ಹೋಗಲಿಲ್ಲ ಇನ್ನೂ...ಕತ್ತಿನಲ್ಲಿದೆ...ಅಲ್ಲೇ ಸಿಕ್ಕಿಕೊಂಡಿದೆ. ಕೆಳಕ್ಕೂ ಇಳಿಯುವದಿಲ್ಲ. ಮೇಲಕ್ಕೂ ಹೋಗುವದಿಲ್ಲ... ಹಿಸುಕುತ್ತಾ ಇದೆ ಕತ್ತನ್ನ. ಈ ಬಾಧೆ ..ಈ ಯಾತನೆ...ಲೊಚ್...ಲೊಚ್...ಲೊಚ್...ಊಂ... ಅಮ್ಮಾ, ನಿನ್ನ ಕೈ ಆದರೂ ಇಡಮ್ಮಾ ನನ್ನ ತಲೇ ಮೇಲೆ...

" ಇಲ್ಲವೇ ? ಅದೂ ಸಾಧ್ಯವಿಲ್ಲವೆ ? ಕೈ ಎತ್ತಲು ಕೂಡ ಶಕ್ತಿಯಿಲ್ಲವೆ ನಿನ್ನಲ್ಲಿ ?...

"ಓ.. ನಿನ್ನಲ್ಲಿ ಜೀವವೇ ಇಲ್ಲವೆ ? ಸತ್ತುಹೋದೆಯಾ ನೀನೂ ಸಹ ?

" ಸತ್ತುಹೋದಳು...ಹೌದು. ಹೌದು. ಸತ್ತುಹೋದಳು ನನ್ನ ತಾಯಿ...ಇದುವರೆಗೂ ನಾನು ಮರೆತೇ ಬಿಟ್ಟಿದ್ದೆ. ಮರೆತು ಏನೇನನ್ನೊ

ಬಡಬಡಿಸಿದೆ ಹುಚ್ಚನ ಹಾಗೆ— 'ಅಮ್ಮ, ಅಮ್ಮಾ!' ಅಂತ. ಇನ್ನೆಲ್ಲಿಯ ಅಮ್ಮ? ಏನು ಕತೆ? ನಾನು ಜೈಲಿಗೆ ಹೋದ ಬಳಿಕ ಪೋಲೀಸರ ಅತ್ಯಾಚಾರದಿಂದಾಗಿ ನರಳಿ ನರಳಿ ಜೀವ ಬಿಟ್ಟಳಲ್ಲ ನನ್ನ ತಾಯಿ !

"ಅಮ್ಮ ಇಲ್ಲ...ಇನ್ನಿಲ್ಲ ನನ್ನ ಅಮ್ಮ. ಯಾರೂ ಇಲ್ಲ ನನಗೆ. ಬಂಧು, ಬಳಗ, ತಂದೆತಾಯಿ, ತಂಗಿ ತಮ್ಮ, ಅಕ್ಕ ಅಣ್ಣ ಯಾರೂ ಇಲ್ಲ...ಎಲ್ಲರೂ ಇದಾರೆ ! ಎಂಥ ಹುಚ್ಚ. ನಾನು 'ಇಲ್ಲ' ಅನ್ನೋದಕ್ಕೆ? ಇದಾರೆ. ಎಲ್ಲರೂ ಇದಾರೆ. ಈ ನಲವತ್ತು ಕೋಟಿ ಜನ ಭಾರತೀಯರೆಲ್ಲ ನನ್ನವರೇ. ನನ್ನ ಅಕ್ಕತಂಗಿಯರೇ. ಅಣ್ಣ ತಮ್ಮಂದಿರೇ. ಗೋಡೆಯ ಮೇಲೆ ನಗೆಬೀರುತಾ ನಿಂತಿರುವ ಓ ಬಾಪೂಜೀ, ತಂದೆ ! ನೀನಿರುವಾಗ ನನಗಾರೂ ಇಲ್ಲವೆಂದು ಹೇಗೆ ಹೇಳಲಿ ನಾನು ? ಯಾರೂ ಇಲ್ಲವಾದರೂ ನೀನಿದ್ದೀ. ನನ್ನ ಸ್ಫೂರ್ತಿಯಾಗಿದ್ದೀ. ನನ್ನ ಜೀವವಾಗಿದ್ದೀ. ನನ್ನ ಆಸೆಯಾಗಿದ್ದೀ. ನನ್ನ ಜೀವ ಜೀವಾಳದ ಜ್ಯೋತಿಯಾಗಿದ್ದೀ....

"ಮತ್ತೆ ಹೊಡೆಮುಕೊಳ್ತಾ ಇದೆ ಈ ಹೊಟ್ಟೆ...ಸೆಳೆಯುತ್ತಾ ಇದೆ ಈ ನಾಲಗೆ. ಮನವೇ, ಶಾಂತವಾಗು, ಪ್ರಾಣವೇ ಸ್ತಬ್ಧವಾಗು. ಸತ್ತೆ... ಸತ್ತೆ...ಹೋದೆ...ಓ. ಹೋಗ್ತಾ ಇದೆ ನನ್ನ ಜೀವ. ಭಾರತದ ಗಾಳಿಯಲ್ಲೆ ಬೆರೆಯುತಾ ಇದೆ ನನ್ನ ಪ್ರಾಣ. ಅಷ್ಟೆ ನನಗೆ ಸಂತೋಷ. ಅಷ್ಟೆ ಸಮಾಧಾನ. ಬರುತ್ತೇನೆ ಪ್ರಿಯ ಭಾರತ ! ನನ್ನ ಮಮತೆಯ ಭಾರತ ! ಜೈಹಿಂದ್ !"

ಏಪ್ರಿಲ್ ೧೯೪೬

# ಜನವರಿ ಇಪ್ಪತ್ತಾರು!

ಎದುರಿಗಿನ 'ಬರಾಕಿ' ನಿಂದ 'ವಂದೇ ಮಾತರಂ' ನ ಘೋಷ ಗಂಭೀರ ವಾಗಿ ಕೇಳಿಸುತ್ತಿತ್ತು.

ಅವರ 'ಬರಾಕಿ' ನಲ್ಲಿ ಆಗಲೆ ಕೊನೆಗಂಡಿತ್ತು ಬೆಳಗಿನ ಪ್ರಾರ್ಥನೆ. ಸೆರೆಯಾಳುಗಳಲ್ಲಿ ಹಲವರು ಮತ್ತೆ ಕಂಬಳಿಗಳಿಗೆ ಶರಣುಹೋಗಿದ್ದರು. ಕೆಲವರು ಕುಳಿತುಕೊಂಡು ಮೆಲ್ಲಗಿನ ದನಿಯಲ್ಲಿ ಭಗವದ್ಗೀತೆಯ ಶ್ಲೋಕ ಗಳನ್ನೋ, ಸ್ವಾತಂತ್ರ್ಯ ಗೀತೆಗಳನ್ನೋ ತಮ್ಮಷ್ಟಕ್ಕೆ ತಾವೆ ಗುಣುಗುಣಿ ಸುತ್ತಿದ್ದರು.

ಮಲ್ಲೇಶಿಗೆ ಇದಾವುದರಲ್ಲೂ ಆಸಕ್ತಿಯಿರಲಿಲ್ಲ. ಭಗವದ್ಗೀತೆಯೂ ಅವನಿಗೆ ಅಪರಿಚಿತವೆ. ಹಳ್ಳಿಯಲ್ಲಿ ಹುಟ್ಟಿ ಹಳ್ಳಿಯಲ್ಲಿ ಬೆಳೆದ ಹುಡುಗ ಆತ. ಸಂಸ್ಕೃತದ ಆ ದೇವಗೀತೆ ಅವನಿಗೆ ಹೇಗೆತಾನೆ ಗೊತ್ತಾದೀತು?

ಪ್ರಾರ್ಥನೆ ಮುಗಿಯುತ್ತಲೂ ಆತ ಮತ್ತೆ ನಿದ್ರಿಸಲು ಪ್ರಯತ್ನಿಸಿದ. ನೆಲಕ್ಕೆ ಹಾಸುವ ಗುಡಾರದಷ್ಟು ದಪ್ಪಗೆ-ಒರಟುಒರಟಾಗಿದ್ದ ಆ ಕಂಬಳಿ ಯನ್ನು ಮುಖದ ತುಂಬಾ ಹೊದೆದುಕೊಂಡು ಹಾಸಿದ್ದ ಕಂಬಳಿಯ ಮೇಲೆ ತಲೆಯೊರಗಿಸಿದ. ಕಿವಿಯಲ್ಲಿ ಹುಳುವೊಂದು ಪ್ರವೇಶಿಸಿದಂತಾಯಿತು. ಸರಿ, ನಿದ್ರೆಯ ವಿಚಾರ ಮಾಯವಾಯಿತು. ಆ ಹುಳುವನ್ನೂ, ಅದರ ವಂಶಾವಳಿಯನ್ನೂ, ಜತೆಗೆ ಅಂಥ ಮೋಟಾರು ಸೆಡ್ಡಿನಲ್ಲಿ ಸೆರೆಯಾಳುಗಳ ಶಿಬಿರವನ್ನೇರ್ಪಡಿಸಿದ ಸರ್ಕಾರವನ್ನೂ ಶಪಿಸುತ್ತ ಎದ್ದುಬಿಟ್ಟ.

ಹೊರಕ್ಕೆ ಬಂದು ಕಟ್ಟೆಯ ಮೇಲೆ ನಿಂತುಕೊಂಡ. ಪಶ್ಚಿಮದಿಕ್ಕಿ ನಿಂದ ಬೀಸಿ ಬರುತ್ತಿದ್ದ ಜನವರಿಯ ತಂಪುಗಾಳಿ ಅವನ ಮೈ ಬಳಸಿಕೊಂಡು ಸುಳಿದು ಹೋಯಿತು. ಅಂಗಳದಲ್ಲಿನ ವಿಶಾಲಕಾಯ ಗಿಡಗಳ ಆಕೃತಿಗಳು ಬೆಳಗಿನ ಜಾವದ ಆ ಮಬ್ಬುಗತ್ತಲೆಯಲ್ಲಿ ಬಹು ಸುಂದರವಾಗಿ ತೋರುತ್ತಿ ದ್ದವು. ಅವುಗಳ ಮೇಲುಗಡೆ ನೀಲವರ್ಣದ ಆಕಾಶ. ಒಂದು ಗಿಡದ ಕಪ್ಪು ಆಕೃತಿಯ ಮೇಲುಗಡೆ ಸುದೂರದಲ್ಲಿ ನಸುಬಿಳಿಯ ಮೋಡದ ಮರಿಯೊಂದು ಮೋಹಕವಾಗಿ ತಲೆಯೆತ್ತಿ ನಿಂತಿತ್ತು. ಅದರ ಮೇಲೆ ಸಣ್ಣಗಿನ ಚಂದ್ರ ಕೋರ. ಎಷ್ಟು ಮನೋಹರವಾಗಿತ್ತು ಆ ನಿಸರ್ಗ!

ಒಂದು ಕ್ಷಣ ಮಲ್ಲೇಶಿಗೆನ್ನಿಸಿತು-ಸುಳ್ಳು, ತಾನು ಸೆರೆಮನೆಯಲ್ಲಿರುವುದು ಬರೀ ಸುಳ್ಳು. ಇಷ್ಟು ಸುಂದರ ನಿಸರ್ಗ, ಇಂಥ ಮೋಹಕ ಚಂದ್ರಮ, ಈ ಆಕಾಶ, ಈ ಮೋಡದ ಮರಿ, ಈ ತಂಪುಗಾಳಿ-ಯಾರಾದರೂ ಬಂಧಿಸಿಡಲು ಸಾಧ್ಯವೇ ಇವನ್ನು ? ತನ್ನ ಶರೀರವೇನೋ ಇಲ್ಲಿ ಸೆರೆಯಲ್ಲಿದೆ. ಆದರೆ ತನ್ನ ಮನಸ್ಸು....?

ಅವನ ಅಂತರ್ದೃಷ್ಟಿಯೆದುರಿಗೆ ಹೊಸದೊಂದು ವಿಶ್ವವೇ ತೆರೆದಂತಾಯಿತು. ಅಲ್ಲಿ ಪಾರತಂತ್ರ್ಯದ ಸುಳಿವಿಲ್ಲ ; ಗುಲಾಮಗಿರಿಯ ನರಕವಿಲ್ಲ. ಅಲ್ಲಿ ಪೋಲೀಸರಿಲ್ಲ; ಅವರ ಲಾಠಿಗಳಿಲ್ಲ. ಶಿಕ್ಷೆ ವಿಧಿಸುವ ಮ್ಯಾಜಿಸ್ಟ್ರೇಟರಿಲ್ಲ. ಭೀಕರ ಕಾರಾಗಾರಗಳಿಲ್ಲ. ಜೇಲರುಗಳಿಲ್ಲ. ಸೂಪರಿಂಟೆಂಡೆಂಟರಿಲ್ಲ. ವಿಚಿತ್ರ ವೇಷಧಾರಿಗಳಾದ ವಾರ್ಡರರೂ ಇಲ್ಲ. ಅಲ್ಲಿರುವುದು ಬರೀ ನೀಲವಾದ ಆಕಾಶ ; ಸುಂದರ ನಿಸರ್ಗ ; ಮೆಲ್ಲನೆ-ಬಹುಮೆಲ್ಲನೆ ಬೀಸುವ ಗಾಳಿ; ಆ ಗಾಳಿಯಂತೆ ಸ್ವಚ್ಛಂದವಾಗಿ ಹರಡಿರುವ ಸ್ವಾತಂತ್ರ್ಯ....

"ಅಂದರ್ ಚಲೋ ! ಜಾವ್ ! ಚಲೇಜಾವ್ !" ಸೆರೆಮನೆಯ ಶಿಪಾಯಿಯ ಕರ್ಕಶ ಕೂಗು ಮಲ್ಲೇಶಿಯ ಕಲ್ಪನಾ ಸೃಷ್ಟಿಯನ್ನು ಭಂಗಗೊಳಿಸಿತು. ಕಟ್ಟೆಯನ್ನು ಬಿಟ್ಟುಬಂದು ಮತ್ತೆ ಹಾಸುಗೆಯ ಮೇಲೊರಗಿಕೊಂಡ. ಸಿಟ್ಟಿನ ಲಾವಾರಸ ಧಗಧಗಿಸುತ್ತಿತ್ತು ಅವನ ಎದೆಯಲ್ಲಿ. ಕಟ್ಟೆಯ ಮೇಲೆ ನಿಂತುಕೊಂಡು ಶುದ್ಧವಾದ ಗಾಳಿ ಸೇವಿಸಲು ಸಹ ಸ್ವಾತಂತ್ರ್ಯವಿಲ್ಲ ಈ ಸೆರೆಮನೆಯಲ್ಲಿ ! ಯಾವ ನೀಚ ಪಶು ಈ ಸೆರೆಮನೆಯ ಕಟ್ಟಳೆ ರಚಿಸಿದ್ದಾನೋ ! ಆ ಪೋಲೀಸನ ಬಗ್ಗೆ ಕೋಪ ಬರಲಿಲ್ಲ ಮಲ್ಲೇಶಿಗೆ; ಕನಿಕರ ಬಂತು. ಪಾಪ ! ಏನು ಮಾಡಿಯಾನು ಆ ಪೋಲೀಸ ! ಹೊಟ್ಟೆಯಪಾಡಿಗಾಗಿ ಈ ಹಾಳು ನೌಕರಿಗೆ ಬಂದು ಸೇರಿಕೊಂಡಿದ್ದಾನು-ಇಲ್ಲಿ ದೊರೆಯುವ ಇಪ್ಪತ್ತು ರೂಪಾಯಿಗಳಿಗಾಗಿ. ಕೆಲಸಕ್ಕೆ ಸೇರಿದೊಡನೆ ಅವನಿಗೆ ದೊರೆತಿರಬಹುದಾದ ಶಿಕ್ಷಣದ ವೈಖರಿಯನ್ನೆಲ್ಲ ಕಲ್ಪಿಸತೊಡಗಿದ ಮಲ್ಲೇಶಿ. 'ಕೈದಿಗಳೊಂದಿಗೆ ಯಾವಾಗಲೂ ಕಠೋರವಾಗಿ ವರ್ತಿಸಬೇಕು. ಮಾತು, ಕೃತಿ, ವರ್ತನೆ, ಧ್ವನಿ, ದೃಷ್ಟಿ ಎಲ್ಲವೂ ಕಠೋರವಾಗಿರಬೇಕು. ಅವರು ಕೇಳಿದ ಪ್ರಶ್ನೆಗಳಿಗೆ ಬೈಗಳ ರೂಪದಲ್ಲೇ ಉತ್ತರ ನೀಡಬೇಕು. ಹೆಚ್ಚು ಉಪದ್ವ್ಯಾಪ ಮಾಡಿದರೆಂದರೆ ದಂಡದಿಂದ ಬಿಗಿಯಬೇಕು-ದನಗ

ಳನ್ನು ಥಳಿಸಿದಂತೆ. ಹಾಗೆ ನಡೆಸಿಕೊಂಡರೇನೇ ಅವರು ಹಾದಿಗೆ ಬರುತ್ತಾರೆ. ಇಲ್ಲವಾದರೆ....' ಎಂದು ಮುಂತಾಗಿ ಸಲಹೆ ಸೂಚನೆ ಕೊಡುವಾಗ ಜೇಲರ್ ಸಾಹೇಬನ ಮುಖ ಯಾವ ರೂಪ ತಳೆದಿದ್ದೀತೊ—ಎಂಬುದನ್ನು ಊಹಿಸಲು ಪ್ರಯತ್ನಿಸಿದ. 'ಜಾವ್ ! ಚಲೇ ಜಾವ್....!' ಎಂಥ ಥಾಟಿ! ಎಂಥ ಧ್ವನಿ ! ಅದರಲ್ಲಿ ತುಂಬಿ ಬಂದ ಆ ತಿರಸ್ಕಾರದ ಭಾವನೆ ! ದರ್ಪದ ಆವೇಗ ! ಅಲ್ಲ !-ಆ ಪೋಲೀಸನದಲ್ಲ ಆ ದರ್ಪ ! ಅದು ಈ ಸರ್ಕಾರದ್ದು ! ಭಾರತೀಯರನ್ನೆಲ್ಲ ಪಶುಗಳಂತೆ ಭಾವಿಸುವ ಈ ಪರಕೀಯ ಸರ್ಕಾರದ್ದು !

—ಪಶುಗಳು ? ಹೌದು. ಅಲ್ಲದಿನ್ನೇನು? ಅವರ ದೃಷ್ಟಿಯಲ್ಲಂತೂ ತಾವು ಪಶುಗಳಿಗಿಂತಲೂ ಕಡೆ. ಹುಳುಗಳಿಗಿಂತಲೂ ಕಡೆ. ಅಂದು ತಮ್ಮ ಹಳ್ಳಿಯಲ್ಲಿ ನಡೆದ ಗೋಳೀಬಾರಿನ ದೃಶ್ಯ ಮತ್ತೆ ಆತನ ದೃಷ್ಟಿಯೆದುರಿಗೆ ಸುಳಿದುಹೋಯಿತು. ರಾಷ್ಟ್ರಧ್ವಜ ಹಿಡಿದುಕೊಂಡು, ಶಾಂತವಾಗಿ, ಶಿಸ್ತಿನಿಂದ ಮೆರವಣಿಗೆ ಹೊರಟಿದ್ದ ಜನರ ಮೇಲೆ ಯಾವ ಕಾರಣವೂ ಇಲ್ಲದೆ ಗುಂಡು ಹಾರಿಸಿದ್ದರಲ್ಲ ಆ ಸರ್ಕಾರದ ಯಂತ್ರಗಳು! ಪೋಲೀಸರೇ ಅವರು? ಅಲ್ಲ—ಪೋಲೀಸರಲ್ಲ ! ಜನರ ಮನೆಮಾರು, ಆಸ್ತಿಪಾಸ್ತಿಗಳ ರಕ್ಷಣೆಗಾಗಿ, ಶಾಂತಿ, ಸುವ್ಯವಸ್ಥೆಗಳ ಪಾಲನೆಗಾಗಿ ನಿಯಾಮಕವಾದ ಪೋಲೀಸರು ಇವರೇನೇ? ಅಲ್ಲ-ಅಲ್ಲ. ಅವರಾದೋ ಬೇರೆ ಜಗತ್ತಿನವರಾಗಿರಬೇಕು. ಈ ಬ್ರಿಟಿಷ್ ಸರ್ಕಾರದ ಪೋಲೀಸರೆಂದರೆ ಮನುಷ್ಯರೇ ಅಲ್ಲ; ಮನುಷ್ಯ ರೂಪ ತಳೆದಿರುವ ಯಂತ್ರಗಳು ! ಈ ಸರ್ಕಾರದಿಂದ ಸಿಕ್ಕುವ ಇಪ್ಪತ್ತು ರೂಪಾಯಿಗಳಿಗಾಗಿ ತಮ್ಮ ಬಾಂಧವರನ್ನೇ ನಿಷ್ಕರುಣೆಯಿಂದ ಕೊಲ್ಲುವ ಕಠೋರ ಯಂತ್ರಗಳು!

—ಯಂತ್ರಗಳು ? ಹೌದು ! ಹೌದು ! ಯಂತ್ರಗಳೇ ಸರಿ. ತಮ್ಮ ಹಳ್ಳಿಯ ಆ ಜನ ಏನು ಮಾಡಿತ್ತು ಈ ಪೋಲೀಸರಿಗೆ ? ಇವರಲ್ಲೊಬ್ಬರಿಗಾದರೂ ಕೈ ಹಚ್ಚಿದ್ದೆವೇ ನಾವು ? ಕನಸಿನಲ್ಲಾದರೂ ಇವರಿಗೆ ಕೇಡು ಬಗೆದಿದ್ದೆವೇ ? ಇವರ ಹೆಂಡಿರು ಮಕ್ಕಳಿಗೇನಾದರೂ ತೊಂದರೆ ಕೊಟ್ಟಿದ್ದೆವೆ ? ಇಲ್ಲ-ಇವರಿಗೆ ಸಿಕ್ಕುವ ಈ ಇಪ್ಪತ್ತು ಬಿಲ್ಲೆಗಳಿಗೇನಾದರೂ ಕೈಹಚ್ಚಿದ್ದೆವೆ ? ಏನು ಮಾಡಿದ್ದೆವೋ—ನಾವು ಏನು ಮಾಡಿದ್ದೆವು ಇವರಿಗೆ ? ಕಾಂಗ್ರೆಸ್ ಮುಖಂಡರ ಬಂಧನದ ಬಗ್ಗೆ ಶಾಂತವಾಗಿ ಪ್ರತಿಭಟನೆ ಮಾಡಲು ಮೆರವಣಿಗೆ ಹೊರಡಿಸಿದ ಮಾತ್ರಕ್ಕೆ ಯಾವ ಮಹಾಪರಾಧ

ಮಾಡಿದಂತಾಯಿತು ? ಈ ಪೋಲೀಸರಿಗೆ ಅದರಿಂದ ಯಾವ ಹಾನಿಯಾಯಿತು ? ಗೋಳೀಬಾರಿಗೆ ಆಜ್ಞೆಕೊಟ್ಟ ಆ ಫೌಜುದಾರನಿಗೆ ನಾವೇನು ಮಾಡಿದ್ದೆವು ? ನಮ್ಮ ಜನರೇ ಇವರೂ. ಹಿಂದೂಸ್ಥಾನದವರೇ. ಇಲ್ಲೇ ಹುಟ್ಟಿ, ಇಲ್ಲೇ ಬೆಳೆದು, ಇಲ್ಲಿನ ಅನ್ನ ನೀರು ತಿಂದೇ ಬೆಳೆದಿರುವವರು. ಆದರೂ ನಮ್ಮ ಜನರನ್ನೇ ಕೊಂದರಲ್ಲ! "ಚಟ್-ಚಟ್-ಚಟ್-ಢಂ-ಢಂ-ಢಂ-ಅಯ್ಯೋ-ಹಾಯ್-ಅವ್ವಾ-ಅಪ್ಪಾ-ಸತ್ತೆ-ಸತ್ತೆ. ಈ ಪೋ ೀ ಲಿ ೀ ಸ ರು ನನ್ನನ್ನು ಕೊಂದರು-ಅಯ್ಯೋ...." ಆ ಕೂಗುಗಳು-ಆ ಆರ್ತಸ್ವರಗಳು-ಆ ನರಳುವಿಕೆ-ಆ ಚೀತ್ಕಾರ-ಆ ಹಾಹಾಕಾರ-ಆ ರಕ್ತಪಾತ....! ಮುದುಕರು, ಮುದುಕಿಯರು, ಹುಡುಗರು, ಹುಡುಗಿಯರು, ನಾಲ್ಕೈದು ವರ್ಷದ ಪುಟ್ಟಪುಟ್ಟ ಕೂಸುಗಳು !—ಎಂಥ ಹತ್ಯಾಕಾಂಡ ಅದು ! ಹಿಟ್ಲರನನ್ನು ಬೈಯುತ್ತಾರಲ್ಲಾ ಇವರು-ಅವನಾದರೂ ಇಂಥ ಘೋರ ಕೆಲಸ ಮಾಡಿರಬಹುದೇ ? ನಮ್ಮ ದೇಶದಲ್ಲೇ-ನಮ್ಮವರೇ ಆದ ಈ ಪೋಲೀಸರೇ-ನಮ್ಮನ್ನೇ ಪಶುಗಳಂತೆ ಕೊಂದರಲ್ಲ....ತನ್ನ ತಾಯಿ....ತನ್ನ ಮುಪ್ಪಿನ ಮುದುಕಿ ತಾಯಿ....ಮೆರವಣಿಗೆ ನೋಡಲು ಬಂದು ಮನೆಯೆದುರಿಗೆ ನಿಂತವಳನ್ನು ಗುಂಡುಹಾಕಿ ಕೊಂದರಲ್ಲಾ ಈ ಪೋಲೀಸರು....

ಆ ಪೋಲೀಸರು....ಈ ಜೈಲಿನ ಪೋಲೀಸ್. ಅವರ ಗೋಳೀಬಾರ್ ....ಇವನ 'ಚಲೇಜಾವ್'....

'ಚಲೇಜಾವ್....ಚಲೇಜಾವ್....' ಎಂದು ತನ್ನಷ್ಟಕ್ಕೆ ತಾನೇ ಹೇಳಿಕೊಂಡು ಮಲ್ಲೇಶಿ ಹಾಸುಗೆಯ ಮೇಲೆ ತಲೆಯನ್ನೊರಗಿಸಿದ. ಅವನಿಗೆ ತಿಳಿಯದಂತೆಯೆ ಕಣ್ಣಿನಲ್ಲಿ ನೀರು ತುಂಬಿ ಬಂದಿತ್ತು. ಗುಂಡು ಬಡಿಯುತ್ತಲೂ 'ಹಾ' ಎಂದು ಚೀರಿ ಕೆಳಕ್ಕುರುಳಿದ ತನ್ನ ಪ್ರೀತಿಯ ತಾಯಿಯ ದುರಂತಮೂರ್ತಿ ಅವನ ದೃಷ್ಟಿಯೆದುರು ಕಟ್ಟಿದಂತಿತ್ತು. ತನ್ನ ತಾಯಿ ! ಅವಳೊಬ್ಬಳನ್ನುಳಿದು ಬೇರಾರೂ ಇರಲಿಲ್ಲ ತನಗೆ ! ತನ್ನ ತಾಯಿ-ತಂದೆ, ಬಂಧು-ಬಳಗ, ಆಪ್ತ-ಇಷ್ಟ, ಅಕ್ಕ-ತಂಗಿ, ಅಣ್ಣ-ತಮ್ಮ ಎಲ್ಲಾ ಅವಳೇ ಆಗಿದ್ದಳು. ಎಷ್ಟು ಅಕ್ಕರೆಯಿಂದ ಸಾಕಿಸಲಹಿದ್ದಳು. ತನ್ನನ್ನು ಎಷ್ಟು ಪ್ರೀತಿಯಿಂದ ಬೆಳೆಸಿದ್ದಳು. ಅರವತ್ತು ವರ್ಷ ವಯಸ್ಸಾಗಿದ್ದರೂ ಆಕೆಯ ಬೆನ್ನು ಕೂಡ ಬಾಗಿರಲಿಲ್ಲ. ಆಗಲೂ ಎಷ್ಟೊಂದು ಉತ್ಸಾಹವಿತ್ತು ಅವ

ಳಲ್ಲಿ ! ಯಾವ ರೋಗಕ್ಕೂ ಬಲಿಬೀಳದೆ ಉಳಿದುಕೊಂಡಿದ್ದ ತನ್ನ ತಾಯಿ ಕೊನೆಗೆ ಈ ಪೋಲೀಸರ ಗುಂಡಿಗೆ ಆಹುತಿಯಾಗಿ ಹೊರಟುಹೋಗಬೇಕೆ ! ಆ ಪೋಲೀಸರು-ಆ ಫೌಜುದಾರ್-ಈ ಪೋಲೀಸ್ ಗಾರ್ಡ್-ಈ ಸೂಪರಿಂಟೆಂಡೆಂಟ್ ! ಇದೆಂಥ ನರಕವಾಯಿತು ನಮ್ಮ ಪ್ರಿಯ ಹಿಂದೂಸ್ಥಾನ ! ಎಂಥ ಯಮದೂತರು ಬಂದಿದ್ದಾರೆ ಇಲ್ಲಿ !....

ಉದ್ವೇಗದಿಂದ ತುಟಿ ಕಚ್ಚಿಕೊಂಡು ಎಡಕ್ಕೆ ಹೊರಳಿದ ಮಲ್ಲೇಶಿ. ಪಕ್ಕದ ಹಾಸುಗೆಯಲ್ಲೊರಗಿದ್ದ ಶಿವೂ ಆಗತಾನೆ ಕಣ್ದೆರೆದಿದ್ದನೇನೋ-ಇವನ ಕಡೆ ಬೆರಗುಗೊಂಡ ದೃಷ್ಟಿ ಹೊರಳಿಸಿ—

"ಯಾಕೋ ಬೆಳಗಿನಲ್ಲೆ ನೀರು ನಿನ್ನ ಕಣ್ಣಾಗ? ಏನಾಯಿತೋ ?" ಎಂದ.

ಮಲ್ಲೇಶಿ ಮಾತನಾಡಲಿಲ್ಲ. ಕಂಬನಿಗಳನ್ನೂ ಮಿಡಿದುಕೊಳ್ಳಲಿಲ್ಲ. ಶೂನ್ಯ ದೃಷ್ಟಿಯಿಂದ ಗೆಳೆಯನನ್ನು ನಿಟ್ಟಿಸುತ್ತಿದ್ದು ಅನಂತರ ಕಂಪಿಸುವ ಸ್ವರದಲ್ಲಿ ಹೇಳಿದ :

"ನನ್ನ ತಾಯಿ ಸತ್ತು ಇಂದಿಗೆ ಐದು ತಿಂಗಳಾಯ್ತು ಶಿವೂ ! ಐದು ತಿಂಗಳಾಯ್ತು !

ಆ ಆರ್ತಸ್ವರ, ಆ ಕಳವಳ, ಆ ಉದ್ವೇಗ, ಆ ವೇದನೆ,—ತಾಯ ಬಗೆಗಿದ್ದ ಅನುಪಮ ಪ್ರೀತಿಯಿಂದ ಭಾರವಾದ ಆ ಕಂಠ ! ಶಿವೂ ಹಾಸುಗೆಯ ಮೇಲೆದ್ದು ಕುಳಿತ. ಗೆಳೆಯನ ಎದೆಯನ್ನು ಸ್ನೇಹದಿಂದ ತಟ್ಟುತ್ತ ಸಂತವಿಸುವ ಸ್ವರದಲ್ಲಿ—

"ಐದು ತಿಂಗಳಾಗಲಿಲ್ಲ ಮಲ್ಲೇಶಿ, ನೂರಾ ಐವತ್ತು ವರ್ಷ ಆಯ್ತು. ಬರೀ ನಿನ್ನ ತಾಯಿ ಮಾತ್ರವಲ್ಲ—ನನ್ನ ತಾಯಿಯೂ ಸತ್ತುಹೋಗಿದಾಳೆ. ನಾವು ನಲವತ್ತು ಕೋಟಿ-ನಮ್ಮೆಲ್ಲರ ತಾಯಿಯೂ ಸತ್ತುಹೋಗಿದ್ದಾಳೆ...." ಎಂದ.

" ಅವಳು ಸಾಯಲಿಲ್ಲಪ್ಪಾ ಶಿವೂ ! ಹಾಗೇ ಸಾಯಲಿಲ್ಲ ಆಕೆ. ಈ ಸರ್ಕಾರದವರು ಕೊಂದರೋ ಅವಳನ್ನು ! ಗುಂಡುಹಾಕಿ ಕೊಂದರು ! ರಕ್ತ ಹೀರಿ ಕೊಂದರು ! ಒಂದೇ ಏಟಿಗೆ ಕೊಂದರು ! ಶಿವೂ....ಶಿವೂ....ಏನು ಮಾಡಿದಳೋ ಆಕೆ ಈ ಪೋಲೀಸರಿಗೆ ? ಯಾಕೆ ಕೊಂದರು ಅವಳನ್ನ ?

ಏನು ಮಾಡಲಿ ಈ ಪೋಲೀಸರನ್ನ ? ಈ ಪರದೇಶೀ ಸರ್ಕಾರವನ್ನ ? ನನ್ನ ಹಿಡಿದುತಂದು ಇಲ್ಲಿ ಹಾಕಿದರು. ಒಂದಲ್ಲ—ಎರಡಲ್ಲ—ಹದಿನೈದು ವರ್ಷ ಶಿಕ್ಷೆ ಕೊಟ್ಟರು....ಯಾರೋ ಇವರು ನಮ್ಮನ್ನ ಹಿಡಿಯೋದಕ್ಕೆ ? ನಮ್ಮನ್ನ ಗುಂಡುಹಾಕಿ ಕೊಲ್ಲೋದಕ್ಕೆ ? ನಮ್ಮನ್ನ ಜೈಲಿನಲ್ಲಿಡೋದಕ್ಕೆ ? ಹೊರಗೆ ಕಟ್ಟೇಮೇಲೆ ಕೂಡ ನಿಂತುಕೋಬಾರದಂತೆ ! 'ಚಲೇಜಾವ್' ಅಂತಾನೆ ಆ ಪೋಲೀಸ್ ! ಇದೆಂಥಾ ಗತಿ ಬಂತೋ ನಮಗೆ ನಮ್ಮ ದೇಶದಲ್ಲೇ ? "
ಎಂದು ಉದ್ವೇಗದಿಂದ ನುಡಿದ ಮಲ್ಲೇಶಿ.

ಶಿವೂಗೆ ಏನು ಹೇಳುವುದಕ್ಕೂ ತೋಚಲಿಲ್ಲ. ಸೆರೆಮನೆಗೆ ಬಂದ ಈ ಐದು ತಿಂಗಳುಗಳಲ್ಲಿ ಮಲ್ಲೇಶಿಯ ಮನಃಸ್ಥಿತಿಯ ಅರಿವು ಅವನಿಗಾಗಿದೆ. ತಪ್ತವಾದ ಜ್ವಾಲಾಮುಖಿಯಂತೆ ಅವನ ಹೃದಯ ಸೇಡಿನಭಾವನೆಯಿಂದ ಕುದಿಯುತ್ತಿದೆಯೆಂಬುದೂ ತಿಳಿದಿದೆ. ಆ ಉರಿಯನ್ನು ಹೊರದೂಡುವುದೂ ಸಾಧ್ಯವಿಲ್ಲವಾಗಿದೆ. ಅದು ಒಳಗೊಳಗೇ ಕುದಿಯುತ್ತಿದೆ. ಕುದಿದು ಕುದಿದು ಅವನ ಎದೆಯನ್ನೆಲ್ಲ ದಹಿಸುತ್ತಿದೆ. ಏನನ್ನೂ ಮಾಡಲಾರ ಆತ ! ಹೌದು. ಏನನ್ನೂ ಮಾಡಲಾರ. ನಾಲ್ಕು ಗೋಡೆಗಳ ಮಧ್ಯದ ಈ ಸೆರೆಮನೆಯಲ್ಲಿ—ಈ ಪೋಲೀಸರು, ವಾರ್ಡರುಗಳ ಕಾವಲಿನಲ್ಲಿ ಆತ ಬಿದ್ದು ಕೊಂಡಿದಾನೆ—ಗಾಯಗೊಂಡ ಹುಲಿ ಹಳ್ಳದಲ್ಲಿ ಸಿಕ್ಕಿಬಿದ್ದು ಚಡಪಡಿಸುವಂತೆ.

ಹೊರಗಿನಿಂದ ಬೂಟುಗಳ ಕಡಕಡ ಸದ್ದು ಕೇಳಿಬಂತು. ಬೆಳಗಿನ ಎಣಿಕೆಯ ನಾಟಕವಾಡಲು, ಸೆರೆಮನೆಯ ನಟರೆಲ್ಲ ಬರುತ್ತಿದ್ದರು. ವಾರ್ಡರರು, ಪೋಲೀಸರು, ಸುಭೇದಾರರು, ಜಮಾದಾರರು, ಒಬ್ಬರ ಹಿಂದೆ ಒಬ್ಬರು. ನಿತ್ಯವೂ ಎರಡು ಬಾರಿ ಈ ನೀರಸ ನಾಟಕ ನಡೆಯಲೇಬೇಕು. ದೊಡ್ಡಿಯಲ್ಲಿ ಕೂಡಿದ ಕುರಿಗಳನ್ನೆಣಿಸುವ ಹಾಗೆ ಈ ಆಗಸ್ಟ್ ಕ್ರಾಂತಿಯ ವೀರರನ್ನೆಲ್ಲ ಎಣಿಸಬೇಕು ಅವರು ! 'ಏಕ್—ದೋ—ತೀನ್—ಚಾರ್.... ಏಕ್—ದೋ—ತೀನ್—ಚಾರ್.... !' ಮತ್ತೆ ಮತ್ತೆ ಅದೇ ಶಬ್ದ....ಅದೇ ಅಂಕಿ. ಅದೇ ಕಠೋರ ಕಂಠ ಧ್ವನಿ—ಅವರು ಎಣಿಸುವಾಗ ಪ್ರತಿಯೊಬ್ಬರೂ ಎದ್ದು ಕುಳಿತುಕೊಳ್ಳಲೇಬೇಕು. ಕಾಹಿಲೆಯಾಗಿದ್ದರೂ ಸರಿ.

ಹಾಸಿಗೆ ಹಿಡಿದಿದ್ದರೂ ಸರಿ. ಎಲ್ಲರೂ ಏಳಲೇಬೇಕು. ಯಾರು ಏಳು ವುದಿಲ್ಲವೋ ಅವರಿಗೆಲ್ಲ ಒದೆಗಳೇ ಒದೆಗಳು....

'ಏಕ್—ದೋ—ತೀನ್—ಚಾರ್.......ಏಕ್—ದೋ—ತೀನ್—ಚಾರ್....' ಜಗತ್ತಿನ ಅಂತ್ಯದವರೆಗೂ ಈ ಎಣಿಕೆ ಎಡೆಬಿಡದೆ ನಡೆಯುವು ದೇನೋ ಎನ್ನಿಸಿತು ಮಲ್ಲೇಶಿಗೆ. ಇನ್ನೂ ಎಷ್ಟು ವರ್ಷ ತಾನೀ ಎಣಿಕೆಗೆ ಗುರಿಯಾಗಬೇಕು ? ಎಷ್ಟುಸಾವಿರ ದಿನ ಇವರಿಗಾಗಿ ಎದ್ದು ಕೂತುಕೊಳ್ಳ ಬೇಕು ? ಹದಿನೈದು ವರ್ಷ ! ಓ ! ಹದಿನೈದು ವರ್ಷ ! ತನ್ನ ಆಯುಷ್ಯದ ಕೊನೆಯುವರೆಗೂ ಇವರ 'ಏಕ್—ದೋ—ತೀನ್—ಚಾರ್' ನಡೆಯು ವುದೋ ಏನೊ....

ಎಣಿಕೆ ಮುಗಿಸಿಕೊಂಡು, ಮುನ್ನಾದಿನದ ಲೆಕ್ಕದೊಂದಿಗೆ ಹೋಲಿಸಿ ಕೊಂಡು, ಯಾರೂ ಓಡಿಹೋಗಿಲ್ಲವೆಂದು ಮನವರಿಕೆ ಮಾಡಿಕೊಂಡು ಅವರೆಲ್ಲಾ ಹೊರಟುಹೋದರು. ಬೂಟುಗಳ ಸದ್ದು ಕ್ರಮೇಣವಾಗಿ ಗಾಳಿಯಲ್ಲಿ ವಿಲೀನವಾಯಿತು. ಮಲ್ಲೇಶಿ ಕುಳಿತ ಹಾಗೇ ಕುಳಿತಿದ್ದ. ಅವನೆದುರಿನ ಹಾಸುಗೆಯ ಮೇಲೆ ಪದ್ಮಾಸನ ಹಾಕಿ ಕುಳಿತಿದ್ದ ಸೆರೆಯಾಳು ವೊಬ್ಬ ಭಗವದ್ಗೀತೆಯ ಶ್ಲೋಕವೊಂದನ್ನು ಮತ್ತೆಮತ್ತೆ ಉರು ಹೊಡೆಯು ತ್ತಿದ್ದ. ಅತ್ತ ಹೊರಳಲಿಲ್ಲ ಮಲ್ಲೇಶಿಯ ಚಿತ್ತ. ಅವನ ಕಿವಿಯಲ್ಲಿ ಸೇರಿ ತಲೆಯಲ್ಲಿ ಗುಂಯ್‌ಗುಡುತ್ತಿದ್ದುದು ಕೇವಲ ಆ 'ಏಕ್-ದೋ-ತೀನ್-ಚಾರ್'—ಎಂದು ನಿಂತೀತೋ ಈ ಚಾರ್ ಚಾರ್ ? ಎಂದು ತನ್ನ ತಾಯಿನಾಡು ಸ್ವತಂತ್ರವಾದೀತು ? ಅಯ್ಯೋ ! ಎಂದು ಸ್ವತಂತ್ರ ವಾದೀತು ?....

"ಬಂಧುಗಳೇ...."

'ಬರಾಕಿನ' 'ಮುಖಂಡ'ನ ಧ್ವನಿ ಅದು. ಆತ ಮಾತನಾಡುತ್ತಿದ್ದ.

"ಇಂದು ಜನವರಿ ಇಪ್ಪತ್ತಾರು. ನಮ್ಮ ಸ್ವಾತಂತ್ರ್ಯ ದಿನ. ಸೆರೆಮನೆ ಯಲ್ಲಿದ್ದರೇನಾಯಿತು ? ನಾವು ಅದನ್ನು ಆಚರಿಸಲೇಬೇಕು. ಈಗ ಸ್ನಾನ ಮುಗಿಯುತ್ತಲೂ ಅಂಗಳದಲ್ಲಿ ಸಭೆ ಸೇರುತ್ತದೆ. ಅದಕ್ಕಾಗಿ ಜೇಲರರ ಅಪ್ಪಣೆಯನ್ನೂ ಪಡೆದುಕೊಂಡಿದ್ದೇವೆ. ಅಲ್ಲಿ ಎಲ್ಲ ಬರಾಕುಗಳವರೂ ಸೇರಿ ವಂದೇ ಮಾತರಂ ಅಂದ ಬಳಿಕ ಶಾಂತವಾಗಿ ಮರಳಿಬರಬೇಕು.

ಗಲಾಟೆ ಮಾಡಬಾರದು. ಸಾಯಂಕಾಲವೂ ಸಭೆ ಸೇರುತ್ತದೆ. ಆಗ ಸ್ವಾತಂತ್ರ್ಯಪ್ರತಿಜ್ಞೆ ತೆಗೆದುಕೊಳ್ಳಲಾಗುತ್ತದೆ."

"ಕೇಳಿದಿಯೇನೋ ಶಿವೂ ?" ಎಂದ ಮಲ್ಲೇಶಿ—ಸಿಟ್ಟಿನಿಂದ ಉರಿಯುತ್ತ. ಶಿವೂ ಉತ್ತರವೀಯಲಿಲ್ಲ. ಮೌನವಾಗಿ ಕತ್ತು ಅಲುಗಾಡಿಸಿದ.

"ಸ್ವಾತಂತ್ರ್ಯದಿನಾಚರಣೆಗೆ ಜೇಲರನ ಅಪ್ಪಣೆಯಂತೆ! ಎಂಥಾ ನಾಚಿಗ್ಗೇಡಿತನ ಇದು! ಯಾರು ಹೇಳಿದರೋ ಇವರಿಗೆ ಆ ಜೇಲರನ್ನ ಕೇಳೋದಕ್ಕೆ? ಇಂಥ ಮೂರ್ಖರೂ ಇದ್ದಾರಲ್ಲ ನಮ್ಮಲ್ಲಿ! ನಮಗೆ ಅಪ್ಪಣೆ ಕೊಡೋದಕ್ಕೆ ಆ ಜೇಲರ್ ಯಾರು? ನಮ್ಮನ್ನ ಹಿಡಿದು ಇಲ್ಲಿ ಹಾಕಿರುವವರಿಂದ ಅಪ್ಪಣೆ ಪಡೀಬೇಕೇನು ನಾವು? ಶಾಂತವಾಗಿರಬೇಕಂತೆ! ದೊಡ್ಡ ಮುಖಂಡ ಇವ! ಉಪದೇಶ ಮಾಡ್ತಾನೆ! 'ಜೇಲಿನಲ್ಲಿ ಕೂಡ ಅಸಹಕಾರ ಮಾಡಬೇಕು—ಸರ್ಕಾರಕ್ಕೆ ತಲೆ ಬಾಗಿಸಬಾರದು. ಇಂದಿನಿಂದ ಎಲ್ಲರೂ ಸ್ವತಂತ್ರರೆಂದು ತಿಳಿದುಕೊಳ್ಳಬೇಕು'—ಎಂದು ಹೇಳಿ ಹೋಗಿಲ್ಲೇನು ಗಾಂಧೀಜೀ ಆಗಸ್ಟ್ ಎಂಟರಲ್ಲಿ? ಹೇಳಿಲ್ಲೇನೋ ಶಿವೂ.. ?"

"ಹುಂ! ಹೌದು. ಹೇಳಿದ್ದಾರೆ."

"ಹಾಗಾದರೆ ಈ ಜೇಲರಿಗೆ ಯಾಕೆ ಕೇಳಬೇಕು ನಾವು? ಸ್ವಾತಂತ್ರ್ಯ ದಿನಾಚರಣೆಯಂತೆ ಸ್ವಾತಂತ್ರ್ಯದಿನಾಚರಣೆ! ಇದೆಂಥಾದ್ದೋ ಇದು ಸ್ವಾತಂತ್ರ್ಯ ದಿನಾಚರಣೆ! ಸ್ವತಂತ್ರರು ನಾವು-ಅನ್ನೋ ಭಾವನೆಯೇ ಇಲ್ಲದಿದ್ದರೆ ಎಷ್ಟು ಪ್ರತಿಜ್ಞೆ ತಕ್ಕೊಂಡರೇನು—ಎಷ್ಟು ಭಾಷಣ ಮಾಡಿದರೇನು—ಎಲ್ಲಾ ವ್ಯರ್ಥ...ಬರೀ ವ್ಯರ್ಥ...ಶಾಂತವಾಗಿರಬೇಕಂತೆ ನಾವು! ಪಾಪ! ದೊಡ್ಡ ಶಾಂತತಾವಾದಿ ಈತ! ಆ ಮಹಾತ್ಮನ ಹೆಸರಿಗೆ ಮಸಿ ಬಳಿಯುವ ಹೇಡಿಗಳಿವರು! ಥೂ! ಬರಾಕಿನ ಮುಖಂಡ ಅಂತೆ ಇವ! ಎಂಥ ಮುಖಂಡನೊ! ಏನ್ಮಾತೊ! ಈ ಪಟ್ಟಣದ ಜನರಿಗೆ ಗಂಡಸುತನ ಅನ್ನೋದು ಏನೂ ಇಲ್ಲೇನೊ? ಅಭಿಮಾನ ಅನ್ನೋದು ಸ್ವಲ್ಪವೂ ಇಲ್ಲೇನೊ? ಶಿವೂ...ಶಿವೂ...ಮಾತಾಡೋ...ಏನಂತೀಯೋ ನೀನು...?"

"ಗಾಂಧೀಜಿಯವರ ಶಿಷ್ಯರು ಅವರು-ಸುಮ್ಮನಿರು ಮಲ್ಲೇಶೀ. ಗಲಾಟೆ ಗಿಲಾಟೆ ಮಾಡಬಾರದು. ಅವರು ಹೇಳಿದ ಹಾಗೆ ಕೇಳಬೇಕು."

" ಇಂಥ ಕೈಲಾಗದ ಹೇಡಿಗಳಾಗಬೇಕು ಅಂತ ಹೇಳಿದ್ದಾರೇನು ಗಾಂಧೀಜೀ ? ಅಹಿಂಸಾ ಅಂದರ ನಮ್ಮನ್ನ ನಾವೇ ಅವಮಾನ ಮಾಡಿ ಕೊಳ್ಳೋದೇನು ? ಸ್ವಾತಂತ್ರ್ಯದಿನಾಚರಣೆ ಅಂದರೆ ಎಂಥಾ ಪವಿತ್ರ ವಾದದ್ದು ! ಅದಕ್ಕೆ ಈ ಜೇಲರನ ಅಪ್ಪಣೆ ಕೇಳೋಕೆ ಹೋದರಲ್ಲಾ ಈ ನಾಚಿಗ್ಗೇಡಿಗಳು ! ಇಂಥಾ ಮೂರ್ಖರಿರೋದರಿಂದಲೇ ಈ ಗತಿ ಬಂದಿ ರೋದು ಹಿಂದುಸ್ಥಾನಕ್ಕೆ. ಮುಖಂಡರಂತೆ ಮುಖಂಡರು !...."

ಶಿವೂ ಮಾತನಾಡಲಿಲ್ಲ. ಮೌನವಾಗಿ ತಲೆಬಾಗಿಸಿದ.

೨

ಸೆರೆಮನೆಯ ಅಂಗಳದಲ್ಲಿದ್ದ ಮಾವಿನ ಗಿಡಗಳ ನೆರಳಿನಲ್ಲಿ ಸಭೆ ಜರುಗಿತು. 'ಬರಾಕು'ಗಳ 'ಪುಢಾರಿ'ಗಳೆಲ್ಲ ಒಬ್ಬೊಬ್ಬರಾಗಿ ಮುಂದೆ ಬಂದು ಜಗಿಜಗಿದು ಭಾಷಣ ಮಾಡಿದುದಾಯಿತು. ಅಂದಿನ ರೊಟ್ಟಿಗೆ ಬೆಲ್ಲ ಸೇರಿಸಿ ಉಂಡೆಮಾಡಿ ತಿಂದು ಸ್ವಾತಂತ್ರ್ಯದ ಹಬ್ಬವನ್ನೂ ಆಚರಿಸಿ ದ್ದಾಯಿತು.

ಸಾಯಂಕಾಲ ಪುನಃ ಸಭೆ ಸೇರಿ ಸ್ವಾತಂತ್ರ್ಯ ಪ್ರತಿಜ್ಞೆಯನ್ನು ಸ್ವೀಕ ರಿಸಬೇಕಾಗಿತ್ತು. ಮಲ್ಲೇಶಿ-ಶಿವೂ ಇತ್ಯಾದಿ ಹುರುಪಿನ ಹುಡುಗರು ಸೇರಿ ಕೊಂಡು ಸಭಾಸ್ಥಾನದ ಬಳಿ ಸುಣ್ಣದಿಂದ ಹಿಂದುಸ್ಥಾನದ ಪಟ ಬರೆದರು- ನೆಲದಮೇಲೆ. ಅದರ ಮಧ್ಯೆ ಗಾಂಧೀಜಿಯ ಆಕೃತಿಯನ್ನೂ ತೆಗೆದರು. ಸೆರೆಯಾಳುಗಳಲ್ಲಿ ಬೇರಾರಿಗೂ ಈ ಕಲ್ಪನೆ ಹೊಳೆದಿರಲಿಲ್ಲ. ಎಲ್ಲರೂ ಅವನ್ನು ಕಂಡು ಸಂತೋಷಪಟ್ಟುಕೊಂಡರು.

ಸಭೆಯ ಸಮಯವಾಯಿತು. ಗಿಡದ ನೆರಳಿನಲ್ಲಿ ಎಲ್ಲ ಸೆರೆಯಾಳು ಗಳೂ ಒಂದುಗೂಡಿದರು. ಮತ್ತೆ ಭಾಷಣಗಳೂ ನಡೆದುವು. ಇನ್ನೇನು ಪ್ರತಿಜ್ಞಾಸ್ವೀಕಾರ ನಡೆಯಬೇಕು. ಅಷ್ಟರಲ್ಲಿ ಸೆರೆಮನೆಯ ಕಛೇರಿಯ ಮುಂದೆ ನಿಂತುಕೊಂಡು ಜೇಲರ್ ಕೂಗುವುದು ಕೇಳಿಸಿತು.

"ಸೂಪರಿಂಟೆಂಡೆಂಟ್ ಬರುತ್ತಿದ್ದಾರೆ. ಎಲ್ಲರೂ ಕೂಡಲೇ ನಿಮ್ಮ ನಿಮ್ಮ ಬರಾಕಿಗೆ ಹೋಗಿರಿ."

—ಸೂಪರಿಂಟೆಂಡೆಂಟ್ !

ಸಭೆಯಲ್ಲಿ ಒಮ್ಮೆಲೆ ಬಿಸಿಯೇರಿತು. ಸ್ವಾತಂತ್ರ್ಯದಿನಾಚರಣೆ ಯೆಂದರೇನು—ಪ್ರತಿಜ್ಞೆಯನ್ನು ಸ್ವೀಕರಿಸದೆ ಹಾಗೇ ಸಭೆ ಮುಗಿಸುವುದೆಂದರೇನು-ಎಲ್ಲಾದರೂ ಉಂಟೇ? ಸೂಪರಿಂಟೆಂಡೆಂಟ್ ಬರಲಿ-ಅವನಪ್ಪ ಬರಲಿ-ಪ್ರತಿಜ್ಞೆ ತೆಗೆದುಕೊಳ್ಳದೆ ಇಲ್ಲಿಂದ ಕದಲುವಂತಿಲ್ಲ—ಎಂದು ಗುಂಪು ಮೌನವಾಗಿ ನಿರ್ಧರಿಸಿತು.

ಪರಿಸ್ಥಿತಿ ಕೈಮೀರುವ ಲಕ್ಷಣ ಕಾಣಿಸುತ್ತಲೂ 'ಬರಾಕಿನ ಮುಖಂಡ'ರಿಗೆ ಯೋಚನೆಗಿಟ್ಟುಕೊಂಡಿತು. ಒಬ್ಬ 'ಮುಖಂಡ' ದನಿಯೆತ್ತಿದ.

"ಗೆಳೆಯರೆ, ಶಾಂತವಾಗಿ ಸಭೆ ನಡೆಸುವುದಾಗಿ ನಾವು ಜೇಲರಿಗೆ ವಚನಕೊಟ್ಟಿದ್ದೇವೆ. ಆ ವಚನದ ಪ್ರಕಾರ ನಡೆಯಲೇಬೇಕು. ಸೂಪರಿಂಟೆಂಡೆಂಟ್ ಆಂಗ್ಲರವ. ಅವನಿಗೆ ನಮ್ಮ ಬಗ್ಗೆ ಸಹಾನುಭೂತಿಯಿಲ್ಲದಿರುವುದು ಸಹಜಿಕವೇ. ಅವ ಬಂದುಬಿಟ್ಟು ನಾವು ಸಭೆ ಸೇರಿರುವುದನ್ನು ನೋಡಿದರೆ ರೇಗದಿರಲಾರ. ನಮ್ಮಿಂದಾಗಿ ಪಾಪ-ಆ ಜೇಲರ್ ಸಾಹೇಬರಿಗೂ ತೊಂದರೆಯಾದೀತು. ಆದ್ದರಿಂದ ಈಗ ನೀವೆಲ್ಲರೂ ಶಾಂತವಾಗಿ ನಿಮ್ಮನಿಮ್ಮ ಬರಾಕುಗಳಿಗೆ ಹೋಗಿರಿ. ಅಲ್ಲಿಯೆ ಪ್ರತಿಜ್ಞಾಸ್ವೀಕಾರ ಮಾಡಿರಿ."

"ನಾವು! ಇಲ್ಲಿಂದ ಒಂದು ಹೆಜ್ಜೆಯನ್ನೂ ಎತ್ತಿಡೋದಿಲ್ಲ!" ಎಂದು ಘೋಷಿಸಿದ ಮಲ್ಲೇಶಿ.

"ಹಾಗೆಲ್ಲಾ ಹುಡುಗತನ ಮಾಡಬಾರದು. ನಾವು ಹೇಳುವ ಮಾತು ಕೇಳಿರಿ. ಇಲ್ಲವಾದರೆ ಏನೇನಾಗುತ್ತದೆಯೊ?" ಎಂದ ಆ ಮುಖಂಡ.

"ಆಗೋದೆಲ್ಲಾ ಆಗಲಿ. ಇದುವರೆಗೆ ಏನೇನಾಗಿಲ್ಲ ರಾಯರೇ? ಎಷ್ಟು ಜನ ಸತ್ತಿಲ್ಲ? ಎಷ್ಟು ಜನ ಗಾಯಗೊಂಡಿಲ್ಲ? ಎಷ್ಟು ಜನ ಮನೆ ಮಾರು ಕಳೆದುಕೊಂಡಿಲ್ಲ? ಇನ್ನೆಷ್ಟು ಜನ ಇಪ್ಪತ್ತು ಇಪ್ಪತ್ತು ವರ್ಷ ಶಿಕ್ಷೆಗೊಳಗಾಗಿಲ್ಲ? ಇವತ್ತು ಸ್ವಾತಂತ್ರ್ಯದಿನ. ಇಂದು ಏನಾದರೂ ಒಳ್ಳೆಯದೇ. ಸೂಪರಿಂಟೆಂಡೆಂಟ್ ಯಾಕೆ—ಆ ವೈಸರಾಯ್ ಬಂದರೂ ನಾವು ಇಲ್ಲಿಂದ ಕದಲಕೂಡದು. ಇವನಿಗೆ ಹೆದರಿ ಇಲ್ಲಿಂದ ಓಡಿಹೋಗಿ ಬರಾಕಿನಲ್ಲಿ ಕೂತು—ಮತ್ತೆ ಸ್ವಾತಂತ್ರ್ಯ ಪ್ರತಿಜ್ಞೆ ತೆಗೆದುಕೊಳ್ಳೋದಕ್ಕೆ ನಾಚಿಕೆಯಾಗೋದಿಲ್ಲೇನು ನಿಮಗೆ?" ಎಂದು ಗುಡುಗಿದ ಮಲ್ಲೇಶಿ.

"ಯಾರೂ ಹೊರಡಕೂಡದು–ಇಲ್ಲೇ ಇರಬೇಕು" ಎಂದು ನೂರಾರು ಕಂಠಗಳು ಏಕಕಾಲಕ್ಕೆ ದನಿಗೂಡಿಸಿದವು.

ಮಹಾದ್ವಾರದ ದಿಕ್ಕಿನಿಂದ ಬೂಟುಗಳ ಕಡಕಡಾಟ ಕೇಳಿಬಂತು. ಆರೂವರೆ ಅಡಿ ಎತ್ತರದ ಸೂಪರಿಂಟೆಂಡೆಂಟ್ ಸಾಹೇಬನ ಆ ವಿಶಾಲ ಕಾಯ ಪುಟ್ಟ ಬೆಟ್ಟದಂತೆ ನುಗ್ಗಿ ಬರತೊಡಗಿತು. ಅವನ ಹಿಂದೆ ಜೇಲರು, ವಾರ್ಡರುಗಳು, ಪೋಲೀಸರು....

ಸೆರೆಯಾಳುಗಳೆಲ್ಲ ಸೈನಿಕರಂತೆ ಸೆಟೆದು ನಿಂತುಕೊಂಡು ಸ್ವಾತಂತ್ರ್ಯ ಪ್ರತಿಜ್ಞೆಯ ಒಂದೊಂದೇ ವಾಕ್ಯವನ್ನುಚ್ಚರಿಸತೊಡಗಿದರು.

ಪ್ರತಿಜ್ಞೆಯನ್ನು ಓದಿ ಹೇಳುತ್ತಿದ್ದ ತರುಣನ ಬಳಿ ಬಂದು ಸಾಹೇಬ ನಿಂತುಕೊಂಡ. ಪಕ್ಕದಲ್ಲಿ ನೆಲದ ಮೇಲೆ ಬರೆದಿದ್ದ ಭಾರತದ ಪಟವೂ, ಅದರಲ್ಲಿನ ಗಾಂಧೀಜಿಯ ಚಿತ್ರವೂ ಅವನ ದೃಷ್ಟಿಗೆ ಬಿದ್ದುವು. ನೀಲವರ್ಣದ ಆತನ ಕಣ್ಣುಬೊಂಬೆ ಒಡನೆಯೆ ಬೆಳ್ಳಗೆ–ಬೆಳ್ಳಗಾದವು. ಹುಬ್ಬು ಗಂಟುಹಾಕಿಕೊಂಡವು. ತುಟಿಗಳು ಒಂದನ್ನೊಂದು ಕಚ್ಚಿಹಿಡಿದುಕೊಂಡವು.

ಸೆರೆಯಾಳುಗಳ ಸಾವಿರಾರು ದೃಷ್ಟಿಗಳು ಆತನ ಮೇಲೆ ಕೇಂದ್ರೀಕೃತವಾಗಿದ್ದ ಹಾಗೇ ಅವನ ಬೂಟುಗಾಲು ರಭಸದಿಂದ ಮೇಲಕ್ಕೆದ್ದಿತು. ಒಂದೇ ಒಂದು ಕ್ಷಣ....ಎಲ್ಲರೂ ರೆಪ್ಪೆ ಹೊಡೆಯದೆ ನೋಡುತ್ತಿದ್ದರು....ಇನ್ನೇನು ಆ ಬೂಟುಗಾಲು ಭಾರತ ಪಟದ ಮೇಲೆ ಬೀಳಬೇಕು. ಅಷ್ಟರಲ್ಲಿಯೇ ಯಾವುದೋ ಜಡಪದಾರ್ಥವೊಂದು ಕಲ್ಲಿನಂತೆ ಹಾರಿಬಂದು ಸಾಹೇಬನ ಬಲಗೆನ್ನೆಗೆ ಬಲವಾದ ಏಟುಕೊಟ್ಟಿತು. 'ಓ' ಎಂದು ಉದ್ಗಾರ ತೆಗೆದು ಆತ ಕೆನ್ನೆಗೆ ಕೈಯಿಟ್ಟುಕೊಳ್ಳುವುದರೊಳಗಾಗಿಯೆ ಇನ್ನೊಂದು ವಸ್ತು ಬೀಸಿ ಬಂದು ಅವನ ಎಡಗೆನ್ನೆಗೆ ಏಟುಹಾಕಿತು.

ಎಂಥ ವಸ್ತು ಅವು ?–ಇನ್ನೇನೂ ಅಲ್ಲ. ಭಾರತೀಯರು ಹಾಕಿಕೊಳ್ಳುವ ಚಪ್ಪಲಿಗಳು ! ಬೆಳಗಾವಿ ಜಿಲ್ಲೆಗೆಲ್ಲ ಪ್ರಸಿದ್ಧವಾದ 'ಜವಾರಿಮೆಟ್ಟು' ಗಳು....!

"ಬದ್ಮ್ಯಾಷ್ ! ಹರಾಮಖೋರ್ ! ಕುತ್ತೇಕೇ ಅವಲಾದ್ ! ಪಕಡೋ ಉಸೆ !" ಎಂದು ಸಾಹೇಬ ಆಕ್ರೋಶಮಾಡುವಷ್ಟರಲ್ಲಿಯೆ 'ವಾರ್ಡರ'

ನೊಬ್ಬ ಮುಂದಾಗಿ ಆ ಚಪ್ಪಲು ಎಸೆದವನನ್ನು-ಹೌದು-ಮಲ್ಲೇಶಿಯನ್ನು ಹಿಡಿದುತಂದ.

ಅವಮಾನ, ಲಜ್ಜೆ, ಕೋಪಗಳಿಂದ ಹುಚ್ಚನಂತಾಗಿದ್ದ ಸಾಹೇಬ. ತನ್ನನ್ನು ಕಂಡರೆ ಗಡಗಡನೆ ನಡುಗುತ್ತಿದ್ದ ಈ ಕೈದಿಗಳೆದುರಿನಲ್ಲಿ-ಈ ಗುಲಾಮ ಭಾರತೀಯರೆದುರಿನಲ್ಲಿ-ಈ ಜೇಲರ್, ವಾರ್ಡರ್‌ಗಳೆದುರಿನಲ್ಲಿ-ತನ್ನಂಥ ಆಂಗ್ಲನಿಗೆ ಇಂಥ ಅವಮಾನ ! ಅವನ ರೊಚ್ಚು ಕುದಿದು ಉಕ್ಕಿತು. ಹತ್ತಿರ ನಿಂತಿದ್ದ 'ವಾರ್ಡರ್'ನ ನಡುಪಟ್ಟಿಯಲ್ಲಿ ನೇತಾಡುತ್ತಿದ್ದ ದಂಡವನ್ನು ರಭಸದಿಂದ ಕಿತ್ತುಕೊಂಡ. ಎದುರಿಗೆ ಕಂಭದಂತೆ ನಿಶ್ಚಲವಾಗಿ ನಿಂತಿದ್ದ ಮಲ್ಲೇಶಿಯ ಬರಿದಲೆಯ ಮೇಲೆ ಟಪಟಪನೆ ಏಟುಹಾಕತೊಡಗಿದ

ನೆತ್ತಿಯ ಮೂಳೆ ಮುರಿದುಹೋಗಿರಬೇಕು. ಅಂಥ ದಪ್ಪಗಿನ ದಂಡದಿಂದ ಒಂದೇ ಸಮನೆ ನಾಲ್ಕೈದು ಏಟುಹಾಕಿದರೆ ಹೇಗೆತಾನೆ ತಡೆದೀತು ಅದು ? ಕಾರಂಜಿಯಿಂದ ಪುಟಿಯುವ ಬಣ್ಣದ ನೀರಿನಂತೆ ಮಲ್ಲೇಶಿಯ ನೆತ್ತಿಯಿಂದ ಕೆಂಪಗಿನ ನೆತ್ತರ ರಭಸದಿಂದ ಚಿಮ್ಮತೊಡಗಿತು. ಮೇಲಕ್ಕೆ ಹಾರಿ ನೆಗೆದು ತಲೆಯ ಮೇಲೆಲ್ಲ ಸುರಿದು, ಕೂದಲನ್ನು ತೋಯಿಸಿ, ಹಣೆಯ ಮೇಲೆಲ್ಲ ಉರುಳಿ, ಕತ್ತಿನಗುಂಟ ಇಳಿದು, ಶರೀರದ ಮೇಲೆಲ್ಲ ಸುರಿಯತೊಡಗಿತು.

"ಲೇ ಜಾವ್ ಏ ಸುವ್ವರ್‌ಕೊ! ಅಂಧೇರಿಮೇ ಢಾಲ್‌ದೊ! ಬೂಟ್ ಸೆಮಾರೊ!" ಎಂದು ಗರ್ಜಿಸಿ ಸಾಹೇಬ ಕೈಲಿದ್ದ ದಂಡವನ್ನು ದೂರ ಬಿಸುಡಿಬಿಟ್ಟು ಸೋತ ನರಿಯಂತೆ ಮುಖ ಮುದುರಿಕೊಂಡು ಹೊರಟುಬಿಟ್ಟ.

"ಬೂಟನಿಂದ ಹೊಡೀತೀಯಾ! ನಿನ್ನ ಗಂಡಸುತನ ನೋಡೋಣ ! ಹೊಡೀ ಬಾ-ನಮ್ಮ ದೇಶ-ನಮ್ಮ ಗಾಂಧೀ ಮಹಾತ್ಮ ಅಂದರೆ ಇಷ್ಟು ಕ್ಷುಲ್ಲಕ ಅಂತ ತಿಳಿದಿದ್ದಿಯೇನು ನೀನು ? ಅವರ ಚಿತ್ರಗಳನ್ನು ಬೂಟುಗಾಲಿನಿಂದ ಒರೆಸೋದಕ್ಕೆ ಹೊರಟಿದ್ದಿಯಲ್ಲ ! ನಾವೆಲ್ಲಾ ಏನು ಬಳೆ ಇಟ್ಟುಕೊಂಡಿದ್ದೇವೆ ಅಂತ ತಿಳಿದಿದ್ದೇನು ? ಕಾಲ ಬದಲಾಗಿದೆ. ನೀವು ಮಾಡಿದ ಅವಮಾನ ಸಹಿಸಿಕೊಂಡು ಸುಮ್ಮಗಿರೋ ಕಾಲ ಹೋಯಿತು. ಇದು 'ಕ್ವಿಟ್ ಇಂಡಿಯಾ' ಕಾಲ....ಆಗಸ್ಟ್ ಕ್ರಾಂತಿ ಕಾಲ....ನೀವು ಬೂಟು ಎತ್ತಿದರೆ ನಾವೂ ಚಪ್ಪಲಿ ಎತ್ತುತ್ತೇವೆ. ದಂಡದಿಂದ ಹೊಡೆದೆ ನೀನು. ನನ್ನ ಕೈ

ಯಲ್ಲೇನೂ ಇಲ್ಲ ಅಂತ ಹೊಡೆಸಿಕೋಬೇಕಾಯಿತು—ನನ್ನ ಕೈಯಲ್ಲೂ ಏನಾದರೂ ಇದ್ದಿದ್ದರೆ....ಒಂದು ಪಿಸ್ತೂಲು ಇದ್ದಿದ್ದರೆ....ತೋರಿಸುತ್ತಿದ್ದೆ ಆವಾಗ...." ಎಂದು ಮಲ್ಲೇಶಿ ಕೂಗುತ್ತಿದ್ದಂತೆಯೇ 'ವಾರ್ಡರರು' ಆತ ನನ್ನು ಎಳೆಯತೊಡಗಿದರು.

ಅವರ ಕೈಗಳನ್ನು ರಭಸದಿಂದ ಕೊಡಹಿಕೊಂಡು ಮಲ್ಲೇಶಿ ತನ್ನ ಕಣ್ಣಿಗೆ ಸೇರುತ್ತಿದ್ದ ರಕ್ತವನ್ನೊರೆಯಿಸಿಕೊಂಡ. ಅನಂತರ ಎರಡು ಕೈಗ ಳನ್ನೂ ಮೇಲಕ್ಕೆತ್ತಿ ಹಿಡಿದು ತಾಂಡವ ನೃತ್ಯದಲ್ಲಿ ತಲ್ಲೀನನಾದ ನಟರಾಜ ನಂತೆ ವಿಕಟವಾಗಿ ಕುಣಿಯುತ್ತ ಉಚ್ಚ ಸ್ವರದಲ್ಲಿ ಘೋಷಿಸಿದ :

**"ಸ್ವತಂತ್ರ ಭಾರತಕ್ಕೇ ಜೈ !"**

**ಮಾರ್ಚ ೧೯೪೬**

# ಸತ್ಯವಾನ ಮರಳಲಿಲ್ಲ....!

ಸೀರೆಯ ನಿರಿಗಳನ್ನು ಹಿಡಿದು ಎತ್ತಿಕೊಳ್ಳುತ್ತ ಭಾಗೀರಥಿ ಗುಡಿಸಿಲಿನ ಕಟ್ಟೆಯನ್ನೇರಿ ಮೇಲೆ ಬಂದಳು. ಮುಚ್ಚಿದ ಬಾಗಿಲಿನ ಮೇಲೆ ಮೆಲ್ಲನೆ ತಟ್ಟುತ್ತ ಸಲುಗೆಯ ದನಿಯಲ್ಲಿ ಕೂಗಿ ಕರೆದಳು :

'ಸಾವಿತ್ರಾ, ಏ ಸಾವಿತ್ರೀಽಽ'

ತನ್ನ ದನಿ ಕಿವಿಗೆ ಬಿದ್ದೊಡನೆ ಆತುರದಿಂದೆದ್ದು ಬಂದು ಬಾಗಿಲು ತೆರೆಯುತ್ತಾಳೆ ತನ್ನ ಸಾವಿತ್ರಿ-ತನ್ನ ಎಳೆವಯದ ಏಕಮಾತ್ರ ಪ್ರೀತಿಯ ಗೆಳತಿ ಸಾವಿತ್ರಿ-ಎಷ್ಟು ವರ್ಷವಾಯಿತಲ್ಲ ಅವುಗಳನ್ನು ನೋಡಿ-ಈಗ ಹೇಗಿರುವಳೊ-ಎಷ್ಟುದ್ದ ಬೆಳೆದಿರುವಳೊ-ತನ್ನನ್ನು ಕಂಡು ಎಷ್ಟು ಸಂತೋಷಪಟ್ಟುಕೊಳ್ಳುತ್ತಾಳೊ-ಎಷ್ಟು ಹಾಸ್ಯ ಮಾಡುತ್ತಾಳೊ-ಎಂದು ಮುಂತಾಗಿ ಸವಿ ಸವಿ ಯೋಚನೆಗಳಲ್ಲಿ ಮಗ್ನಳಾಗಿದ್ದ ಭಾಗೀರಥಿಗೆ ನಿರಾಶೆಯಾಯಿತು. ಅವಳ ಪ್ರೀತಿಯ ಆತುರದ ಕರೆಗೆ ಓ ಕೊಡಲಿಲ್ಲ ಅವಳ ಗೆಳತಿ. ಬಾಗಿಲೂ ತೆರೆಯಲ್ಪಡಲಿಲ್ಲ. ಒಳಗಡೆ ಇರುವಳೊ ಇಲ್ಲವೊ-ಇದ್ದು ಮಲಗಿಕೊಂಡು ಬಿಟ್ಟಿದ್ದಾಳೊ-ಇಲ್ಲ-ಎದ್ದು ಎಲ್ಲಿಗಾದರೂ ಹೊರಟುಹೋಗಿದಾಳೊ ಎಂದುಕೊಳ್ಳುತ್ತ ಬಾಗಿಲನ್ನು ನೂಕಿ ಒಳಕ್ಕೆ ನಡೆದಳು.

ಗುಡಿಸಿಲನ್ನೆಲ್ಲ ಆವರಿಸಿಕೊಂಡಿದ್ದ ಕತ್ತಲೆಯಲ್ಲಿ ಕ್ಷಣಕಾಲ ಯಾವುದೂ ಗೋಚರವಾಗಲಿಲ್ಲ. ತೆರೆದ ಬಾಗಿಲಿನೊಂದಿಗೆ ಸಾಯಂಕಾಲದ ಮಂದ ಪ್ರಕಾಶ ಒಳನುಗ್ಗಿ ಗುಡಿಸಿಲಿನಲ್ಲಿನ ವಸ್ತುಗಳನ್ನೆಲ್ಲ ಬೆಳಗಿಸಿತು. ಮೂಲೆಯಲ್ಲಿನ ಹೊಲಸು ಹಾಸುಗೆಯ ಮೇಲೆ ಯಾರೋ ಒರಗಿಕೊಂಡು ನರಳುತ್ತಿದ್ದುದು ಕೇಳಿಸಿತು. ಓ! ಸಾವಿತ್ರಿಯ ಅಜ್ಜಿಯಿರಬೇಕು ಈಕೆ—ಮುಪ್ಪಿನ ಮುದುಕಿ ಅಜ್ಜಿ !

'ಅಜ್ಜೀ, ಅಜ್ಜಮ್ಮಾಽಽ' ಎಂದಳು ಭಾಗೀರಥಿ ಅವಳ ಹಾಸುಗೆಯ ಬಳಿ ಕುಳಿತುಕೊಳ್ಳುತ್ತ.

ತಲೆ ತುಂಬಾ ಹೊದೆದುಕೊಂಡಿದ್ದ ಕೌದಿಯ ಮುಸುಕನ್ನು ತೆರೆದು ಮುಖ ಹೊರಕ್ಕೆ ಹಾಕಿದಳು ಅಜ್ಜಿ. ಬಹು ದಿನಗಳ ದೀರ್ಘ ಕಾಯಿಲೆ ಅವಳ ಸುಕ್ಕು ಮುಖವನ್ನು ಇನ್ನೂ ಸುಕ್ಕು ಸುಕ್ಕಾಗಿಸಿರಬೇಕು. ಕಣ್ಣಿನ

ಶಕ್ತಿಯೂ ಕಡಿಮೆಯಾಗಿತ್ತು. ಕೆಮ್ಮುತ್ತ ಕೆಮ್ಮುತ್ತ ಭಾಗೀರಥಿಯನ್ನು ನಿಟ್ಟಿಸಿನೋಡಿದಳು. ಗುರುತು ತಿಳಿಯಲಿಲ್ಲ. 'ಯಾರವ್ವಾ ನೀ?' ಎಂದಳು.

ಮುದುಕಿಯ ಮುಖಕ್ಕೆ ತೀರ ಹತ್ತಿರ ತನ್ನ ಮುಖ ಒಯ್ದು ಅವಳ ಹಣೆಯ ಮೇಲೆ ಕೈಯನ್ನಾಡಿಸುತ್ತ ಭಾಗೀರಥಿ 'ನಾನು-ಗೌಡರ ಭಾಗೀರಥಿ. ಸಾವಿತ್ರಿ ನಾನು ಸಣ್ಣವರಿದ್ದಾಗಿಂದ ಗೆಳತಿಯರವ್ವಾ. ಐದು ವರ್ಷದಾಗ್ಯ ಮರೆತುಬಿಟ್ಟೇನು ಅಜ್ಜವ್ವಾ ನನ್ನ?' ಎಂದಳು.

'ಅವ್ವs! ನಮ್ಮ ಭಾಗೂನ್ಯs? ಥೂ! ನನ ಮಂಜಾಳ ಹೋಗಲಿ! ಕಣ್ಣs ಕಾಣಿಸೂವುದಿಲ್ಲವ್ವಾ! ಯಾವಾಗ ಬಂದಿಯುವ್ವಾ ನನ್ನ ಮಗಳs' ಎನ್ನುತ್ತ ಅಜ್ಜಿ ಎದ್ದು ಕುಳಿತುಕೊಳ್ಳಲು ಪ್ರಯತ್ನಿಸಿದಳು. ಸಾಧ್ಯವಾಗ ಲಿಲ್ಲ. ನರಳುತ್ತ ನರಳುತ್ತಾ ಹಾಗೇ ಹಾಸುಗೆಯ ಮೇಲೊರಗಿಕೊಂಡಿದ್ದು 'ಈಗ ಎಷ್ಟು ಮಕ್ಕಳ ತಾಯಿಯುವ್ವಾ ನೀನು?' ಎಂದಳು.

ನಾಚಿಕೆಯಿಂದ ಮುಖ ಓರೆಮಾಡಿ ಭಾಗೀರಥಿ—'ಇಲ್ಲ ಅಜ್ಜಿ, ಇನ್ನೂ ಆಗಲಿಲ್ಲ' ಎಂದಳು.

'ಅದ್ಯಾಕs? ಎಷ್ಟು ವರ್ಷ ಆತಲ್ಲ ಮದುವಿ ಆಗಿ?'

'ಆಗಲೇಳವ್ವ. ಏನವಸರ? ಈ ವರ್ಷ....' ನರಳುತ್ತಿದ್ದ ಮುದುಕಿಯ ಮುಖದ ಮೇಲೆ ಕ್ಷಣ ಕಾಲ ನಗೆಯ ಅಲೆಯೊಂದು ಮೂಡಿ ಮಾಯ ವಾಯಿತು. 'ಅದ್ಯಾಕ ಅರ್ಧಕ್ಕs ಮಾತು ನಿಲ್ಲಿಸತೀಯೆ? ಈ ವರ್ಷ ಬರೂದೈತೇನ ಪಾಪಾ?'

ಮಾತನಾಡುವಂತಿರಲಿಲ್ಲ ಭಾಗೀರಥಿ. ಬರಲಿರುವ ತಾಯ್ತನದ ಸುಖದ ನೆನಹು ಅವಳ ನಾಲಗೆಯನ್ನು ಸೆಳೆಯುತ್ತಿತ್ತು. ಒಂದೆರಡು ಕ್ಷಣ ಮೌನವಾಗಿದ್ದು ಅನಂತರ ಹಠಾತ್ತಾಗಿ ಕೇಳಿದಳು.

'ಸಾವಕ್ಕ ಎಲ್ಲಿದಾಳೇ ಅಜ್ಜಿ? ಕಾಣೂದಿಲ್ಲಲ್ಲ?'

ಮುದುಕಿಯ ಮುಖದ ಮೇಲೆ ಅರಳಿದ್ದ ನಗೆಯ ಲಹರಿ ಅಡಗಿ ಹೋಗಿ ಚಿಂತೆಯ ಕಾರ್ಮುಗಿಲು ಕವಿದುಕೊಂಡಿತು. ಕೊಂಚ ಕಾಲ ವಿರಮಿಸಿಕೊಂಡಿದ್ದ ಕೆಮ್ಮು ಮತ್ತೆ ಪ್ರಾರಂಭವಾಯಿತು. ನರಳುತ್ತಾ ಹೇಳಿದಳು.

'ಏನು ಹೇಳ್ಲಿ ತಂಗೀ ನಿನಗ! ನಮ್ಮ ಸಾವಿತ್ರಿಗೆ ಹೀಂಗಾದೀತಂತ ಕನಸು ಮನಸಿನಾಗ ಕೂಡಾ ಬಂದಿರಲಿಲ್ಲ ನನಗ.'

ದಿಗಿಲುಗೊಂಡು ಕೇಳಿದಳು ಭಾಗೀರಥಿ. 'ಯಾಕಜ್ಜಿ, ಹೀಂಗ ಮಾತಾಡುತ್ತೀ ? ಏನಾಗೈತಿ ನಮ್ಮ ಸಾವೂಗ ?'

'ಆಗೂದೇನವ್ವಾ ? ಹುಚ್ಚs ಹಿಡದಾಂಗಾಗೈತಿ....'

ಹುಚ್ಚು! ತನ್ನ ಸಾವಿತ್ರಿಗೆ ಹುಚ್ಚು! ಭಾಗೀರಥಿಯ ಎದೆ ಧಡಧಡಿ ಸತೊಡಗಿತು. ಮುದುಕಿಯ ಮಾತನ್ನು ನಂಬುವುದಕ್ಕೇ ಸಾಧ್ಯವಿರಲಿಲ್ಲ. ನಂಬದಿರುವುದೂ ಸಾಧ್ಯವಿರಲಿಲ್ಲ. ಹುಚ್ಚು! ಈ ಎಳೆ ಹರಯದಲ್ಲಿ, ಮದುವೆಯಾಗಿ ಸುಖವಾಗಿ ಸಂಸಾರ ನಡೆಸಬೇಕಾದ ವಯಸ್ಸಿನಲ್ಲಿ ತನ್ನ ಪ್ರಾಣ ಪ್ರಿಯ ಗೆಳತಿಗೆ ಹುಚ್ಚು! ಛೆ ! ಇರಲಾರದು—ಎಂದುಕೊಂಡಳು ಭಾಗೀರಥಿ. ಈ ಮುದುಕಿಗೇ ಹುಚ್ಚು ಹಿಡಿದಿದೆಯೊ ಏನೊ! ಇದ್ದರೂ ಇದ್ದೀತು. ಮುದಿ ವಯಸ್ಸಿನಲ್ಲಿ ಬುದ್ಧಿ ಭ್ರಮಣೆಯಾಗುತ್ತದೆನ್ನುತ್ತಾರೆ. ಅದೇನೂ ಸುಳ್ಳಾಗಿರಲಾರದು. ಅಜ್ಜಿಗೇನು ಕಡಮೆಯಾಗಿದೆಯೆ ವಯಸ್ಸು? ಅರವತ್ತು ಮೀರಿರಬಹುದು. ಈಚೆಗೆ ಕಾಯಿಲೆಯೂ ಬಲವಾದ ಹಾಗಿದೆ. ಅದಕ್ಕೇ ಏನಾದರೂ ಹುಚ್ಚು....

'ಹುಚ್ಚು ಅಂದರs ಹುಚ್ಚs ಅಲ್ಲವ್ವಾ. ಪೂರಾ ಹುಚ್ಚು ಆದರ ಅದೊಂದು ತರಾ. ಆದರs ಇದು ಅತ್ಲೂ ಅಲ್ಲ. ಇತ್ಲೂ ಅಲ್ಲ. ಏನೋ ಒಂದು ತರಾನs. ಒಂದೊಂದು ದಿನಾ ನೆಟ್ಟಗs ಇರ್ತಾಳ. ಒಂದೊಂದು ದಿನ ಹುಚ್ಚೀ ಹಾಂಗ ಮಾಡ್ತಾಳ. ಉಂಡರ ಉಂಡಳು. ಇಲ್ಲದಿದ್ದರ ಇಲ್ಲ. ಕೂಲಿಗೆ ಹೋದರ ಹೋದಳು. ಇಲ್ಲದಿದ್ದರ ಇಲ್ಲ. ಸುಮ್ಮನs ಒಲೀ ಮುಂದ ಕೂತುಕೊಂಡು ತಾಸು ತಾಸುಗಟ್ಲೆ ಬೆಂಕೀ ಉರಿಸ್ತಾ ಇರ್ತಾಳ. ನನ್ನ ಹುಡುಗಿಗೆ ಏನಾತೋ ಏನೋ ಅವ್ವಾ! ನನ್ನ ಕಂದ ಸೊರಗಿ ಸೊರಗಿ ಸಾಯಾಕಾಗ್ಯಾಳ....' ಎಂದು ಹೇಳಿ ಅಜ್ಜಿ ಬಲವಾಗಿ ಕೆಮ್ಮತೊಡಗಿದಳು.

ಕೌದಿಯನ್ನೆಳೆದು ಅಜ್ಜಿಯ ಕತ್ತಿನವರೆಗೂ ಹೊದೆಯಿಸಿ ಭಾಗೀರಥಿ ಕೇಳಿದಳು. 'ಈಗ ಎಲ್ಲಿದಾಳಜ್ಜೀ ಸಾವಿತ್ರಿ ?'

'ಎಲ್ಲಿದಾಳೊ, ಏನು ಮಾಡ್ತಾಳೊ ಆ ಶಿವಶಂಕರನs ಬಲ್ಲ. ನನಗಾವರೂ ನೆಟ್ಟಗೈತ್ಯೇ ಅಂದರ ಅದೂ ಇಲ್ಲ. ಆರು ತಿಂಗಳಾಯಿತು ಹಾಸಿಗೀ

ಬಿಟ್ಟು ಏಳಾಕಾಗಿಲ್ಲ. ಅವಳು ನೋಡಿದರ ಹುಚ್ಚೀ ಹಾಂಗ ತಿರುಗತಾಳ. ಸುಡುಗಾಡಗಟ್ಟಿಗೆ ಹೋಗಿ ತಾಸು ತಾಸು ಕೂತಿರತಾಳಂತವ್ವಾ ನನ್ನ ಹುಡುಗಿ. ಯಾವುದೋ ಒಂದು ದೊಡ್ಡ ದೆವ್ವಾನs ನನ್ನ ಕೂಸಿಗೆ ಬಡಕೊಂಡಿರಬೇಕು ಅಂತಾರ ಊರವರು. ಅದರಿಂದನs ಈಕೆಗೆ ಹುಚ್ಚು ಹಿಡಿದಿರಬೇಕು....'

ಸುಡುಗಾಡಗಟ್ಟಿಗೆ ಸಾವಿತ್ರಿ ! ಏನು ಕೆಲಸ ಅವಳಿಗೆ ಸ್ಮಶಾನದಲ್ಲಿ ? ಅಲ್ಲಿಗೆ ಹೋಗಿ ತಾಸು ತಾಸು ಕೂತಿರುವುದು ! ಈಗಲೂ ಅಲ್ಲೇ ಇರು ವಳೊ ಏನೊ. ಏನಿದ್ದೀತು ಇದಕ್ಕೆ ಕಾರಣ ? ದೆವ್ವ? ಭೂತ? ಪಿಶಾಚಿ? ಅವುಗಳ ಅಸ್ತಿತ್ವವನ್ನು ನಂಬುವ ಸ್ಥಿತಿಯಲ್ಲಿರಲಿಲ್ಲ ಭಾಗೀರಥಿ. ಪಟ್ಟಣ ದಲ್ಲಿ, ಸುಶಿಕ್ಷಿತ ಪತಿಯ ಸಹವಾಸದಲ್ಲಿ ಐದು ವರ್ಷಗಳನ್ನು ಕಳೆದ ಯುವತಿ. ಅಂಥ ಭ್ರಾಮಕ ವಿಷಯಗಳನ್ನೆಲ್ಲ ಆಕೆ ನಂಬಲಾರಳು. ಹಾಗಾದರೆ? ಇನ್ನೇನಿ ದ್ದೀತು ಹಾಗಾದರೆ? ಇಂಥ ಸಾಯಂಕಾಲದ ಸಮಯದಲ್ಲಿ, ಕತ್ತಲೆ ಮುತ್ತುವ ಹೊತ್ತಿನಲ್ಲಿ ಸಾವಿತ್ರಿಯನ್ನು ಸ್ಮಶಾನ ಆಕರ್ಷಿಸಲು ಕಾರಣವೇನು ?

ಹಠಾತ್ತಾಗಿ ಅವಳ ತಲೆಯಲ್ಲಿ ವಿಚಾರವೊಂದು ಸುಳಿಯಿತು. 'ಇಷ್ಟು ದಿನ ಸಾವಿತ್ರಿಯ ಮದುವೆ ಯಾಕಾಗಲಿಲ್ಲ ಅಜ್ಜವ್ವಾ?' ಎಂದು ಕೇಳಿದಳು.

ಕ್ಷೀಣವಾಗಿ ನಗೆ ಬೀರುತ್ತ ಮುದುಕಿ ಉತ್ತರವಿತ್ತಳು. 'ಮದಿವೆ ! ಮೊದಲs ಬಡವರು ನಾವು. ಅವರಿವರ ಹೊಲದಾಗ ಕೂಲಿಮಾಡಿ ಬಂದ ಕಾಳಿನಿಂದ ಹೊಟ್ಟೆ ಹೊರೆಯುವರು. ಇವಳಪ್ಪ ಅವ್ವ ಬದುಕಿದ್ದರಂತೂ ಒಂದು ತರಾ ಇರತಿತ್ತು. ಈಗ ಯಾರವ್ವಾ ಕೇಳಬೇಕು ? ಅದರಾಗ ಈಕೆಗೆ ಇಂಥಾ ಹುಚ್ಚು ಬಡಕೊಂಡಿತು. ಹುಚ್ಚು ಈಕೀನ್ನ ಬಿಡೋದಿಲ್ಲ ಹುಡುಗಿ ಉಳಿಯೋದಿಲ್ಲ ಅಂತೈತಿ ಊರೆಲ್ಲಾ. ಇಂಥಾ ಹುಚ್ಚೀನ್ನ ಮಾಡಿಕೊಳ್ಳುವರು ಯಾರವ್ವಾ ? ಒಂದು ವೇಳೆ ಯಾರಾದರೂ ತಯಾ ರಾಗಿ ಬಂದರೂ ಕೂಡಾ ಈಕೆ ತಯಾರಾಗಬೇಕಲ್ಲ ? ಮದುವೀ ಮಾತು ತಗದರ ಸಾಕು — ಕಣ್ಣು ಕೆಂಪಗ ಮಾಡಿಬಿಟ್ಟು ಮನೀ ಬಿಟ್ಟು ಹೋಗ ತಾಳ. ಎರಡು ಮೂರು ದಿನ ಮನಿಗೇ ಬರೂದಿಲ್ಲ....'

ಪ್ರಾಣಪ್ರಿಯ ಗೆಳತಿಗುಂಟಾದ ಈ ದುರವಸ್ಥೆಯನ್ನು ತಿಳಿದು ಭಾಗೀರಥಿ ಗೆಷ್ಟು ಸಂಕಟವಾಗಿರಬೇಡ ! ಮೊದಲೇ ಅತಿ ಕೋಮಲ ಹೃದಯ ಅವ

ಳದು. ಗರ್ಭಿಣಿಯಾದಂದಿನಿಂದ ಇನ್ನೂ ಹೆಚ್ಚಿತ್ತು ಆ ಕೋಮಲತೆ. ಗೆಳತಿಯ ಗತಿಯನ್ನು ನೆನೆದು ನೆನೆದು ಅವಳ ಕರುಳು ಕುದಿಯತೊಡಗಿತು. ಸಾಧ್ಯವಿದ್ದಷ್ಟೂ ಬೇಗ ಆಕೆಯನ್ನು ಕಂಡು ಬಾಚಿ ತಬ್ಬಿಕೊಂಡು, ತನ್ನ ಎದೆಯೊಳಗಡೆ ಬಚ್ಚಿಟ್ಟುಕೊಂಡು ಈ ಕೆಟ್ಟ ಜಗತ್ತಿನ ದೃಷ್ಟಿಯಿಂದ ರಕ್ಷಿಸ ಬೇಕೆಂದು ಯೋಚನೆ ಬಂತು.

'ಈಗ ಎಲ್ಲಿರಬಹುದು ಅಜ್ಜೀ ಸಾವಿತ್ರಿ?' ಎಂದಳು ಕಾತರದ ದನಿ ಯಲ್ಲಿ.

'ಎಲ್ಲಿದಾಳೊ! ಬಹಾಳ ಮಾಡಿ ಸುಡಗಾಡ ಗಟ್ಟಿಯೊಳಗs ಇದಾಳೊ ಏನೊ' ಎಂದಳು ಅಜ್ಜಿ ದುಃಖದಿಂದ ಭಾರವಾದ ಸ್ವರದಲ್ಲಿ.

'ಹಾಂಗಾದರ ನಾ ಅಲ್ಲಿಗೇ ಹೋಗಿ ನೋಡತೇನಜ್ಜಿ. ಇವತ್ತು ಅವಳನ್ನ ನಮ್ಮ ಮನಿಗೇ ಕರಕೊಂಡು ಹೋಗ್ತೇನೆ. ನಿನಗ ಅಡಿಗೇನಾ ದರೂ ಮಾಡಿಟ್ಟದಾಳೇನು?'

'ಹೂಂ. ಇವತ್ತೇನೊ ಮಾಡಿಟ್ಟದಾಳ. ನನಗೇನೇಳು. ಒಂದಿ ಷ್ಟಾದರೆ ಆತು. ತಿಂದು ಬಿದ್ದುಕೊಂತೀನಿ. ನನ್ನ ಕಂದವ್ವನದೇ ಚಿಂತಿ ನನಗೆ!'

'ಹಾಂಗಾದರ ನಾ ಹೋಗ್ತೇನಜ್ಜಿ. ಅಲ್ಲಿಗೇ ಹೋಗಿ ನೋಡತೇನೆ.'

'ಏ, ನೀ ಅಂಥಾದ್ದೇನೂ ಮಾಡಬ್ಯಾಡೇ. ಬಸಿರಿಯಾಗಿದ್ದೀ. ಸುಡುಗಾಡು ತಿರುಗೂದು ಚಲೋ ಅಲ್ಲ ನಮ್ಮವ್ವಾ. ನಿನಗೂ ಏನಾರೆ ಬಡಕೊಂಡೀತು ಅರಿಷ್ಟ....' ಎಂದಳು ಅಜ್ಜಿ.

'ಅದರಾಗೇನೈತಿ ಬಿಡಜ್ಜೀ! ಎಲ್ಲಾರೂ ಒಂದಿನ ಅಲ್ಲಿಗೇ ಹೋಗು ವರಲ್ಲೇನು? ಹೂಂ. ಬರ್ತೀನಿ ಹಾಂಗಾದರ. ಮತ್ತೆ ಬರ್ತೀನೆ' ಎನ್ನುತ್ತ ಅವಸರವಸರವಾಗಿ ಹೊರಟು ಬಿಟ್ಟಳು.

೨

ಸ್ಮಶಾನದ ದಾರಿಯನ್ನಾರೂ ಅವಳಿಗೆ ತೋರಿಸಬೇಕಾದ ಅಗತ್ಯವಿರ ಲಿಲ್ಲ. ಆ ಹಳ್ಳಿಯಲ್ಲೇ ಹುಟ್ಟಿ ಅಲ್ಲೇ ಬೆಳೆದ ಕುವರಿಯಲ್ಲವೆ ಅವಳು? ಊರ ಹೊರಗಡೆ ಕಬ್ಬಿನ ತೋಟಗಳಿಗೆ ಹೊಂದಿಕೊಂಡಿದ್ದ ಆ ಸ್ಮಶಾನ,

ಅದರಲ್ಲಿನ ಆ ಹಾಳುಭಾವಿ ಎಲ್ಲವೂ ಅವಳಿಗೆ ಚಿರಪರಿಚಿತವಾದವುಗಳು. ಚಿಕ್ಕತನದಲ್ಲಿ ಇನ್ನೂ ಲಂಗಾ ಹಾಕುವ ಬಾಲೆಯರಾಗಿದ್ದಾಗ ಸಾವಿತ್ರಿಯೊಂದಿಗೆ ಆ ಸ್ಮಶಾನದಲ್ಲಿ ಆಡು ಮೇಯಿಸುತ್ತ ಅಲ್ಲಿನ ಹಾಳು ಭಾವಿಯ ಕಟ್ಟೆಯ ಮೇಲೆ ಇಬ್ಬರೂ ಕುಳಿತು ಹರಟುತ್ತಿದ್ದುದೂ ಉಂಟು. ಸ್ಮಶಾನದ ಹತ್ತಿರ ಹತ್ತಿರ ಬರುತ್ತಿದ್ದ ಹಾಗೆ ಭಾಗೀರಥಿಗೆ ಆ ಬಾಲ್ಯಕಾಲದ ನೆನಪಾಯಿತು. ಒಂದರೆಕ್ಷಣ ಅವಳ ಮನಸ್ಸು ಹತ್ತು ವರ್ಷಗಳಿಗೆ ಹಿಂದಿನ ಆ ಸವಿ ಸವಿ ಸನ್ನಿವೇಶಗಳಲ್ಲಿ ರಮಿಸಿ ಬಂತು. ತಾವಿಬ್ಬರೂ ಆ ಹಾಳು ಭಾವಿಯ ಮೇಲೆ ಕುಳಿತುಕೊಂಡು ಹುಚ್ಚು ಹುಚ್ಚು ಹುಡುಗಾಟದ ಮಾತನಾಡುತ್ತ ನೀರಿಲ್ಲದ ಆ ಭಾವಿಯಲ್ಲಿ ಹರಳುಗಳನ್ನೆಸೆಯುತ್ತಿದ್ದ ದೃಶ್ಯ ಮತ್ತೆ ಅವಳ ಬಗೆಗಣ್ಣೆದುರು ಮೂಡಿತು. ಈಗಲೂ ಸಾವಿತ್ರಿ ಆ ಭಾವಿಯ ಮೇಲೇ ಕುಳಿತಿದ್ದಾಳೋ ಏನೋ. ಈಗಲೂ ಹರಳುಗಳನ್ನೆತ್ತಿ ಎಸೆಯುತ್ತಿದ್ದಾಳೊ ಏನೋ....

ಅವಳ ಯೋಚನೆಯೇನೂ ಸಟೆಯಾದುದಾಗಿರಲಿಲ್ಲ. ಸ್ಮಶಾನಕ್ಕೆ ಬಂದು ನೋಡಿದಾಗ ಅದೇ ಆ ಹಾಳು ಭಾವಿಯ ಕಟ್ಟೆಯ ಮೇಲೆ ಶಿಲಾಮೂರ್ತಿಯಂತೆ ಮಂಡಿಸಿದ್ದ ಆಕೃತಿಯೊಂದು ಗೋಚರವಾಯಿತು. ಸಾಯಂಕಾಲದ ಸೂರ್ಯನ ಮಬ್ಬು ಬೆಳಕಿನಲ್ಲಿ ಆಕಾರ ಅಷ್ಟು ಸ್ಫುಟವಾಗಿ ತೋರುತ್ತಿರಲಿಲ್ಲವಾದರೂ ಭಾಗೀರಥಿಯ ಸ್ನೇಹದ ಕಣ್ಣು ಆ ವ್ಯಕ್ತಿಯನ್ನು ತಟ್ಟನೆ ಗುರುತಿಸಿತು. ಹೌದು. ತನ್ನ ಸಾವಿತ್ರಿಯೇ ಆಕೆ. ಸಂದೇಹವೇ ಇಲ್ಲ. ಅದೇ ಆ ಕುಳಿತ ಭಂಗಿ, ಅದೇ ಆ ನೀಳವಾದ ಕತ್ತಿನ ನಿಲುವು. ಸೆರಗನ್ನು ಮೆಟ್ಟಿ ಎದ್ದು ಕಾಣುವ ದೊಡ್ಡದಾದ ತುರುಬು, ಕಾಲ ಮೇಲೆ ಕಾಲು ಹಾಕಿ ಕುಳಿತುಕೊಳ್ಳುವ ಆ ಸೊಗಸು — ಮುಖ ಆ ಕಡೆ ತಿರುಗಿದ್ದರೂ ಸಹ ಸಾವಿತ್ರಿಯವಳೇ ಎಂದು ಹೇಳಬಲ್ಲಳು ಭಾಗೀರಥಿ.

ಭಾವಿ ನಾಲ್ಕೈದು ಅಡಿ ದೂರದಲ್ಲಿರಬೇಕಾದರೆ ಭಾಗೀರಥಿ ನಿಂತುಕೊಂಡು ಕಥಲದ ಕಣ್ಣುಗಳಿಂದ ಗೆಳತಿಯನ್ನು ನಿಟ್ಟಿಸಿನೋಡಿದಳು. ಆ ಅದ್ಭುತ, ವಿಲಕ್ಷಣ, ಗಂಭೀರ ಮೌನವೂ, ಧ್ಯಾನಮಗ್ನ ಗಿರಿಜೆಯಂಥ ಆ ಕುಳಿತ ಭಂಗಿಯೂ ಅವಳಿಗೆ ವಿಸ್ಮಯ ಹುಟ್ಟಿಸದಿರಲಿಲ್ಲ. ಕೊಂಚವಾದರೂ ಚಲನವಲನ ಆ ಶರೀರದಲ್ಲಿ ?— ಹರಳು ಎತ್ತಿ ಭಾವಿಗೆಸೆಯುವುದು

ದೂರ ಉಳಿಯಿತು; ಅವಳ ಬೆರಳು ಸಹ ಅತ್ತ ಇತ್ತ ಚಲಿಸುತ್ತಿರಲಿಲ್ಲ. ದೃಷ್ಟಿ? ಮುಖ ಆ ಕಡೆ ಹೊರಳಿದ್ದುದರಿಂದ ಅದಾವುದೂ ಗೊತ್ತಾಗುವಂತಿರಲಿಲ್ಲ.

ಇನ್ನು ತಡೆದುಕೊಳ್ಳಲಾರದವಳಾಗಿ ಭಾಗೀರಥಿ ಕೂಗಿದಳು.

'ಸಾವಿತ್ರೀsss'

ಸ್ಮಶಾನದ ಆ ವಿಲಕ್ಷಣ ಮೌನದಲ್ಲಿ ಭಾಗೀರಥಿಯ ಕೂಗು ಪ್ರತಿಧ್ವನಿಯ ತೆರೆಗಳನ್ನೆಬ್ಬಿಸಿತು. ಹತ್ತಿರದ ಬೆಳವಲಗಿಡದ ಮೇಲೆ ಕುಳಿತಿದ್ದ ಕಲ್ಕುಟನ ಹಕ್ಕಿಯೊಂದು 'ಕುಟುರ್, ಕುಟುರ್' ಎಂದು ಕೂಗಿ ಹಾರಿ ಹೋಯಿತು. ಭಾವಿಯ ಕಟ್ಟೆಯ ಮೇಲೆ ಕುಳಿತಿದ್ದ ವ್ಯಕ್ತಿ ಮಾತ್ರ ಹಾಗೇ ಕುಳಿತಿತ್ತು ನಿಶ್ಚಲವಾಗಿ, ನೀರವತೆಯಿಂದ. ಅದರ ದೇಹದ ಒಂದು ಅವಯವವೂ ಕದಲಲಿಲ್ಲ.

ಹೃದಯದಲ್ಲಿನ ಪ್ರೀತಿಯೆಲ್ಲವನ್ನೂ ದನಿಯಲ್ಲಿ ಒಂದುಗೂಡಿಸಿ 'ಸಾವಿತ್ರಾ, ಏ ಸಾವೂss' ಎಂದು ಕರೆಯುತ್ತ ಭಾಗೀರಥಿ ಗೆಳತಿಯ ಎದುರಿಗೆ ಬಂದು ನಿಂತುಕೊಂಡಳು.

ಮುಖಕ್ಕೆ ಮುಖ ಇದುರಾಯಿತು. ದೃಷ್ಟಿಗೆ ದೃಷ್ಟಿ ಬೆರೆಯಿತು. ಎಂಥ ವಿಚಿತ್ರ ದೃಷ್ಟಿ ಅದು ಸಾವಿತ್ರಿಯದು! ಭಾಗೀರಥಿಯ ಮೈ ಜುಮ್ಮೆಂದಿತು. ಜೀವಕಳೆಯದೊಂದು ಕಣವೂ ಇದ್ದಂತಿರಲಿಲ್ಲ ಸಾವಿತ್ರಿಯ ಆ ದೃಷ್ಟಿಯಲ್ಲಿ. ಅದರಲ್ಲಿ ಅರ್ಥವಿರಲಿಲ್ಲ. ಸ್ನೇಹವಿರಲಿಲ್ಲ. ಮಾಧುರ್ಯವಿರಲಿಲ್ಲ. ಮಾರ್ದವತೆಯಿರಲಿಲ್ಲ. ಕ್ರೌರ್ಯವೂ ಇರಲಿಲ್ಲ. ಕರುಣೆಯೂ ಇರಲಿಲ್ಲ. ಈ ಎಲ್ಲ ಭಾವನೆಗಳನ್ನೂ ಮೀರಿ ಯಾರಿಗೂ ಗೋಚರವಾಗದಂಥ ಅದೃಶ್ಯ ವಸ್ತುವಾವುದನ್ನೋ ಶೋಧಿಸುವ ಹಾಗಿತ್ತು ಆ ದೃಷ್ಟಿ!

ಭಾಗೀರಥಿಯನ್ನಾಕೆ ಗುರುತಿಸಿದಂತೆ ತೋರಲಿಲ್ಲ. ಬೆಳ್ಳಗೆ ಬಿಳಚಿಕೊಂಡಿದ್ದ ಆ ಮುಖದಲ್ಲಿನ ಒಂದು ಗೆರೆಯೂ ಅಲುಗಾಡಲಿಲ್ಲ. ಒಂದನ್ನೊಂದು ಬಿಗಿಯಾಗಿ ತಬ್ಬಿಕೊಂಡಿದ್ದ ತುಟಿ ಹಾಗೇ ಇದ್ದವು. ತೆರೆಯಲಿಲ್ಲ ಬಾಯಿ. ಗೆಳತಿಯನ್ನು ಸ್ವಾಗತಿಸಲು ಆಕೆ ಮೇಲಕ್ಕೇಳಲೂ ಇಲ್ಲ. ಭಾಗೀರಥಿಗೆ ಪ್ರತಿಯಾಗಿ ಆ ಸಮಯದಲ್ಲಿ ಬೇರೆ ಯಾರಾದರೂ ಅಲ್ಲಿಗೆ ಬಂದಿದ್ದಲ್ಲಿ ಸಾವಿತ್ರಿಯನ್ನು ಆ ವಿಲಕ್ಷಣ ಸ್ಥಿತಿಯಲ್ಲಿ ಕಂಡು ನಿಜಕ್ಕೂ 'ಭೂತ! ಭೂತ!'

ಎಂದುಕೊಳ್ಳುತ್ತ, ಹೆದರಿ ಓಡಿಬಿಡುತ್ತಿದ್ದರೊ ಏನೊ. ಭಾಗೀರಥಿ ಮಾತ್ರ ಧೈರ್ಯ ಕಳೆದುಕೊಳ್ಳಲಿಲ್ಲ. 'ಸಾವಿತ್ರೀ, ನನ್ನ ಗುರುತು ಹತ್ತೊದಿಲ್ಲೇ ನವ್ವಾ? ನಾನು, ನಿನ್ನ ಗೆಳತಿ ಭಾಗೀರಥಿ....' ಎನ್ನುತ್ತ ಅವಳ ಬಳಿ ಕುಳಿತುಕೊಂಡಳು.

ಗುರಿಯಿಟ್ಟ ಶೂಲದಂಥ ತನ್ನ ದೃಷ್ಟಿಯನ್ನು ಕದಲಿಸದೆ ಸಾವಿತ್ರಿ ಮೌನವಾಗಿ ಕುಳಿತಿದ್ದಳು. ಮಾತನಾಡಲಿಲ್ಲ. ಅಜ್ಜಿ ಹೇಳಿದ ಮಾತು ನಿಜವಿದ್ದರೂ ಇದ್ದೀತು ಎನ್ನಿಸದಿರಲಿಲ್ಲ ಭಾಗೀರಥಿಗೆ. ಸಾವಿತ್ರಿಗೆ ಹುಚ್ಚು ಹಿಡಿದಿರಬಹುದು; ಇಲ್ಲವಾದರೆ ಹೀಗೇಕೆ ಕುಳಿತುಕೊಳ್ಳುತ್ತಿದ್ದಳು ಶವದ ಹಾಗೆ?

ಬಾಲ್ಯಕಾಲದ ಅಭ್ಯಾಸ ಭಾಗೀರಥಿಯನ್ನು ಹರಳು ಎತ್ತಿಕೊಳ್ಳುವಂತೆ ಪ್ರೇರಣೆ ಮಾಡಿತು. ಪುಟ್ಟದೊಂದು ಹರಳನ್ನೆತ್ತಿಕೊಂಡು ಭಾವಿಯಲ್ಲಿ ತೂರಿದಳು. ಹಾಳುಭಾವಿಯ ಆಳದಿಂದ ವಿಲಕ್ಷಣವಾದ ಪ್ರತಿಧ್ವನಿ ಕೇಳಿ ಬಂತು. ಸಾವಿತ್ರಿಯ ಹೃದಯದ ಮೂಲೆ ಮೂಲೆಯಲು ಅದರ ಪ್ರತಿಧ್ವನಿ ನಿನದಿಸಿರಬೇಕು; ಬಾಲ್ಯದ ಆ ಮಧುರ ನೆನಹನ್ನು ಕೆರಳಿಸಿ ಎಬ್ಬಿಸಿರ ಬೇಕು. ಅದುವರೆಗೂ ಅವಳ ಮನಸ್ಸನ್ನು ಮುತ್ತಿಕೊಂಡಿದ್ದ ವಿಲಕ್ಷಣ ಮೌನ ಕರಗಿಹೋಯಿತು. ಹಾಳು ಭಾವಿಯನ್ನೊಂದು ಸಲ ನಿರೀಕ್ಷಿಸಿ ಅವಳ ದೃಷ್ಟಿ ಹತ್ತಿರ ಕುಳಿತಿದ್ದ ಭಾಗೀರಥಿಯ ಮೇಲೆ ಸ್ಥಿರವಾಯಿತು. ಹೌದು. ಗುರುತು ತಿಳಿಯತೊಡಗಿತ್ತು. ತನ್ನ ಚಿಕ್ಕತನದ ಗೆಳತಿ ಭಾಗೀ ರಥಿಯಲ್ಲವೆ ಇವಳು? ಮದುವೆಯಾಗಿ ಗಂಡನ ಮನೆಗೆ ಹೋದಂದಿನಿಂದ ಇದುವರೆಗೂ ಕಂಡಿರಲಿಲ್ಲ. ಈಗ ಬಂದಿದಾಳೆ ತನ್ನ ಭಾಗೂ....

ಗೆಳತಿಯ ದೃಷ್ಟಿಯಲ್ಲಿನ ವಿಲಕ್ಷಣ ಕಳೆ ಮಾಯವಾಗಿ ಪರಿಚಯದ ಕಳೆ ಮಿನುಗುತ್ತಿದ್ದಾಗಲೆ ಆಕೆ ಶುದ್ಧಿಗೆ ಬಂದಳೆಂಬುದನ್ನು ಭಾಗೀರಥಿ ಕಂಡು ಕೊಂಡಳು. ಐದು ವರ್ಷಗಳ ಕಾಲ ಎದೆಯಲ್ಲಿ ಹಿಡಿದು ಹಾಕಿದ್ದ ಒಲವೆಲ್ಲ ಒಮ್ಮೆಲೆ ಧುಮುಕಿ ಬಂದು ಗೆಳತಿಯನ್ನು ತಬ್ಬಿಕೊಂಡಿತು. 'ಸಾವಿತ್ರಾ, ಸಾವೂ, ನನ್ನ ಸಾವೀsss,' 'ಭಾಗೀರಥೀ, ಭಾಗೂ, ನನ್ನ ಭಾಗೀsss'. ಇಷ್ಟೆ ಆಗ ಹೊರಟ ಮಾತು. ಅಕೃತ್ರಿಮ ಗೆಳೆತನದ ಅದ್ಭುತ ದೃಶ್ಯ

ಅದು. ಮಾತಿಗೆ ಮಹತ್ವವಿಲ್ಲ ಅಲ್ಲಿ. ಅದು ಅವ್ಯಕ್ತ ಲೋಕ. ಅಲ್ಲಿ ಭಾವನೆಗಳದೇ ರಾಜ್ಯ !

ಆ ಭಾವನಾವೇಗ ಕೊಂಚ ಇಳಿದ ತರುವಾಯ ಭಾಗೀರಥಿ ಗೆಳತಿಯ ಕೆನ್ನೆಗಳಿಗೆ ಕೆನ್ನೆ ಒತ್ತುತ್ತ, ಪ್ರೀತಿಯಿಂದ ಕಂಪಿಸುವ ದನಿಯಲ್ಲಿ ಕೇಳಿದಳು.

' ಎಲುಬೆಲುಬಾಗಿ ಹೋಗಿದ್ದೀಯಲ್ಲೇ ಸಾವೂ ? ಏನಾಯ್ತೇ ನಿನಗೆ? ಯಾವ ಅರಿಷ್ಟ ಬಡಕೊಂಡಿತೇ ? ಎಷ್ಟು ಚೆಂದಾಗಿದ್ದೆಯಲ್ಲ ಆಗ. ಗೌರೀ ದೇವಿಯ ಹಾಂಗ ! ಈಗ ಹ್ಯಾಗಾಂಗಿದ್ದೀಯ ! ಮೈಯೆಲ್ಲಾ ಸೊರಗಿ ಬಿದಿರಿನಾಂಗ ಆಗ್ಯೆತೆ. ಕಣ್ಣೆಲ್ಲಾ ಒಳಗ ಹೋಗ್ಯಾವ. ಮೈಬಣ್ಣ ಬೆಳ್ಳ ಗಾಗ್ಯೆತೆ. ಇವೆಲ್ಲಾ ಯಾಕಾಯ್ತೇ ? ಎನಾಯ್ತೇ ನಿನಗೆ ? '

ಮಾತುಗಳ ಹಿಂದೆ ಹಿಂದೆಯೆ ಅವಳಿಗೆ ದುಃಖ ಒತ್ತರಿಸಿ ಬಂತು. ಗೆಳತಿಯ ಎದೆಗೆ ಎದೆ ಒತ್ತುತ್ತ ಮೌನವಾಗಿ ಬಿಕ್ಕಳಿಸತೊಡಗಿದಳು.

ಅವಳ ಅಳುವನ್ನು ಕಂಡು ಸಾವಿತ್ರಿಗೂ ಅಳು ಬರಲಿಲ್ಲ. ಅವಳ ಹೃದಯ ಅಳುತ್ತಿತ್ತೊ ಏನೊ ಯಾರು ಬಲ್ಲರು ? ಆ ಪುಟ್ಟ ಜೀವದ ಅಂತ ರಾಳದಲ್ಲಿ ಎಂಥ ಪ್ರಚಂಡ ಅಗ್ನಿ ಉರಿಯುತ್ತಿತ್ತು, ಎಂಥ ಭೀಕರ ಚಂಡ ಮಾರುತ ಬೀಸುತ್ತಿತ್ತೊ, ಎಂಥ ಜ್ವಾಲಾಮುಖಿ ಧಗಧಗಿಸುತ್ತಿತ್ತೊ ಏನೊ—ಮುಖ ಮಾತ್ರ ಯಾವ ಭಾವನೆಯನ್ನೂ ವ್ಯಕ್ತಗೊಳಿಸಲಿಲ್ಲ. ಹೃದಯಕ್ಕೆ ಹಿಡಿದ ಕನ್ನಡಿಯಂತೆ ಮುಖ—ಎಂದು ಹೇಳುತ್ತಾರೆ. ಸಾವಿತ್ರಿಯ ಮುಖ ಮಾತ್ರ ಈ ಹೇಳಿಕೆ ಪೂರಾ ಸುಳ್ಳೆಂಬುದನ್ನು ಸಾರುವಂತಿತ್ತು. ಸಹಾನುಭೂತಿಯ ವಿದ್ಯುದಾಲಿಂಗನವೂ ಸಹ ಅವಳ ವಿಲಕ್ಷಣ ಗಾಂಭೀರ್ಯದ ಹಿಮಾಚಲವನ್ನು ಕರಗಿಸಲಾಗಲಿಲ್ಲ. ಭಾವಿಗೆ ಎದುರಾಗಿದ್ದ ಗೋರಿಯೊಂದನ್ನು ಶೂನ್ಯವಾಗಿ ನಿಟ್ಟಿಸುತ್ತ ಆಕೆ ಸುಮ್ಮನೆ ಕುಳಿತು ಕೊಂಡಿದ್ದಳು.

ಗೆಳತಿಯ ಗದ್ದವನ್ನು ಹಿಡಿದು ತೀಡುತ್ತ ಭಾಗೀರಥಿ ಕಳವಳದಿಂದ ಕೇಳಿದಳು.

' ಇಲ್ಲೇನು ಕೆಲಸವೇ ಸಾವೂ ನಿನ್ದು ಈ ಹೊತ್ತಿನಾಗ ? '

' ಕೆಲಸ ? '

'ಹಂ?'

'ಏನು ಕೆಲಸ ಅಂತ ಏನು ಹೇಳ್ಲಿ ಭಾಗೂ? ಬ್ಯಾರೆ ಕೆಲಸ ಆದ್ರೂ ಏನೈತಿ ನನಗ?'

'ಕೆಲಸ ಮಾಡದಿದ್ದರ ಹೊಟ್ಟಿ ತುಂಬೂದು ಹ್ಯಾಂಗ? ಪಾಪ—ಅಜ್ಜಿಯಂತೂ ಮುದುಕಿಯಾದಳು. ಆಕೆಯ ಮೈಯಾಗೂ ನೆಟ್ಟಗಿಲ್ಲ. ಉಣ್ಣಾಕ ಗಿಣ್ಣಾಕ ಬ್ಯಾಡೇನು?'

'ನನಗಂತೂ ಏನೂ ಬ್ಯಾಡಾಗೈತಿ ಭಾಗೂ. ಅಜ್ಜಿಗೆಷ್ಟು ಬೇಕೋ ಅಷ್ಟು ಮಾಡಿರ್ತೀನಿ. ಆಕೀನ್ನ ಮಾತ್ರ ಎಂದೂ ಉಪವಾಸ ಕೆಡವಿಲ್ಲ. ನಾ ಹ್ಯಾಂಗಿದ್ದರೇನು—ಏನಾಗಬೇಕಾಗೈತಿ?'

'ಆದದ್ದಾದರೂ ಏನು ನಿನಗ?'

'ಆಗೂದೆಲ್ಲಾ ಆಗಿಹೋಯ್ತು ಭಾಗೂ. ಗೋರಿಯೊಳಗ ಬಂದು ಬೀಳೂದೊಂದ್ಯ ಉಳದಿರೂದು!'

ಆ ವಿಲಕ್ಷಣ ಮಾತುಗಳನ್ನು ಕೇಳಿ ಮತ್ತೆ ಭಾಗೀರಥಿಯ ಕಣ್ತುಂಬಿ ಬಂತು. 'ಇಂಥಾ ಮಾತ್ಯಾಕ ಆಡತೀಯೆ? ಏನಾಯ್ತು ನಿನಗೆ?' ಎನ್ನುತ್ತಾ ಗೆಳತಿಯನ್ನು ಬಿಗಿಯಾಗಿ ತಬ್ಬಿಕೊಂಡಳು. 'ನನ್ನ ಕೊರಳಾಣೆ ನಿನಗೆ ಸಾವಿತ್ರೀ, ಹೇಳಾಕ್ಬೇಕು ನನಗ. ಹೀಂಗ್ಯಾಕ ಹುಚ್ಚು ಹಿಡಿದವರಾಂಗ ಮಾಡ್ತಾ ಇದ್ದೀಯಾ?'

'ಹುಚ್ಚು?'

'ಹುಚ್ಚು ಅಲ್ಲದಿದ್ದರ ಇನ್ನೇನನ್ನಬೇಕಿದಕ್ಕ? ಇಂಥಾ ಹೊತ್ತಿನಾಗ ಇಲ್ಲಿ ಸುಡುಗಾಡಿನಾಗ ಬಂದು ಕೂತಿದ್ದೀಯಲ್ಲ?'

'ನನ್ನ ಪ್ರಾಣ ಎಲ್ಲಾ ಇಲ್ಲೇ ನಿಂತೈತಿ ಭಾಗೂ. ಯಾರಿಗೂ ಗೊತ್ತಾಗೋದಿಲ್ಲ ಅದು. ನನಗ ಹುಚ್ಚು ಹಿಡಿದೈತಿ ಅಂತ ಊರೆಲ್ಲಾ ಅಂತೈತಿ ಅಂತೆ. ಎಂಥಾ ಹುಚ್ಚು, ಯಾಕ ಹಿಡೀತು ಅನ್ನೂದು ಒಬ್ಬರಿಗೂ ಗೊತ್ತಿಲ್ಲ, ತಿಳಿದುಕೊಳ್ಳೋ ಮನಸೂ ಯಾರಿಗೂ ಬರಲಿಲ್ಲ. ನಿಜಾ ಹೇಳಬೇಕಂದರ ನನಗ ಹುಚ್ಚೂ ಹಿಡಿದಿಲ್ಲ. ಏನೂ ಹಿಡಿದಿಲ್ಲ ಭಾಗೂ. ಜೀವದ ಮ್ಯಾಲ್ಯ ನನಗ ಬ್ಯಾಸರ ಬಂದೈತಿ. ಯಾವಾಗ ನನ್ನ ಪ್ರಾಣ ಹೋಗತೈತೋ. ಯಾವಾಗ ಇಲ್ಲಿ—ಈ ಎಮರಿನ ಗೋರಿಯ ಮಗ್ಗಲಾಗ ನಾ ಬಂದು ಅದರ

ಮಣ್ಣಿನ ಕೂಡ ಸೇರತೇನೊ ಅನ್ನಸ್ತೈತಿ ನನಗ. ಹಾಳು ಸಾವು ಇನ್ನೂ ಬರವೊಲ್ಲದು. ಬಾ ಬಾ ಅಂತ ದಿನಾಗಲೂ ಕರೀತಾಇದೀನಿ. ಆದರೂ ಅದು ಬರವೊಲ್ಲದು. ಅದಕ್ಕಽ ದಿನಾಗಲೂ ಇಲ್ಲಿ ಬಂದು ಅದರ ಧ್ಯಾನ ಮಾಡ್ತಾ ಇದೀನಿ ಭಾಗೂ. ಅದಕ್ಕ ಹುಚ್ಚು ಅಂತಾರ ಹಳ್ಳೀ ಮಂದಿ. ಅವರಽ ಹುಚ್ಚರು. ಅಲ್ಲೇನು ?' ಎಂದಳು ಸಾವಿತ್ರಿ.

'ಹೌದು. ಹೌದು ನನ್ನ ತಂಗೀ. ನಿನಗ ಹುಚ್ಚಿ ಅನ್ನುವರಽ ದೊಡ್ಡ ಹುಚ್ಚರು. ನಡೀ. ಮನಿಗೆ ಹೋಗೋಣ. ಕತ್ತಲಾಗ್ತಾ ಬಂತು.' ಎನ್ನುತ್ತ ಭಾಗೀರಥಿ ಗೆಳತಿಯನ್ನೆಬ್ಬಿಸತೊಡಗಿದಳು.

ಸಾವಿತ್ರಿ ಮೇಲಕ್ಕೇಳಲಿಲ್ಲ. ಕುಳಿತಲ್ಲೇ ಕುಳಿತುಕೊಂಡಿದ್ದು 'ನಾ ಬರೋದಿಲ್ಲ ಭಾಗೂ. ನೀ ಹೋಗಿಬಿಡು. ಇಲ್ಲೇ ಕೂತಿರತೇನೆ ಇನ್ನೂ ಸ್ವಲ್ಪ ಹೊತ್ತು. ನಾಳೆ ಮುಂಜಾನೆ ನಿಮ್ಮನೆಗೆ ಬರ್ತೀನಂತೆ....' ಎಂದಳು.

ಅವಳನ್ನು ಬಲವಂತವಾಗಿ ಮೇಲಕ್ಕೆಬ್ಬಿಸುತ್ತ 'ಇವತ್ತು ನನ್ನ ಮಾತು ಕೇಳು ಸಾವಕ್ಕ. ನಾನು ನೀನು ಬೆಟ್ಟಿ ಆಗಿ ಐದು ವರ್ಷದ ಮ್ಯಾಲೆ ಆಗಿ ಹೋಯ್ತು. ಇಂದು ನಮ್ಮನೆಗೇ ಹೋಗೋಣ. ಅಲ್ಲೆ ಉಂಡು ಮಲಗಿ ಕೊಳ್ಳೋಣ. ನಿಮ್ಮಜ್ಜಿಗೂ ಹೇಳಿದ್ದೇನೆ. ನಡಿ, ಎಷ್ಟೆಷ್ಟು ಮಾತಾಡೋದೈತಿ ನಿನ್ನ ಸಂಗಡ ! ಬಾ.' ಎಂದು ಹೇಳುತ್ತಾ ಭಾಗೀರಥಿ ಎಳೆಯುತ್ತ ಎಳೆಯುತ್ತಲೇ ಸಾವಿತ್ರಿಯನ್ನು ಸ್ಮಶಾನದಿಂದ ಹೊರಡಿಸಿದಳು.

೩

ರಾತ್ರಿ ಹತ್ತು ಗಂಟೆಯಾಗಿ ಹೋಗಿತ್ತು.

ಊಟ ಮುಗಿಸಿಕೊಂಡು ಗೆಳತಿಯರಿಬ್ಬರೂ ಅಟ್ಟದ ಮೇಲಿನ ಕೊಟಡಿಯಲ್ಲಿ ಅಕ್ಕಪಕ್ಕದಲ್ಲಿ ಒರಗಿಕೊಂಡಿದ್ದರು—ಒಂದೇ ಹಾಸುಗೆಯ ಮೇಲೆ. ಆ ಕೊಟಡಿ, ಆ ಹಾಸುಗೆ, ಆ ಸ್ನೇಹದ ವಾತಾವರಣ ಎಲ್ಲವೂ ಬಾಲ್ಯದ ಸವಿನೆನಹುಗಳನ್ನು ಮತ್ತೆ ಮತ್ತೆ ಕೆರಳಿಸುತ್ತಿತ್ತು. ಆ ಸಮಯಕ್ಕಂತೂ ಸಾವಿತ್ರಿಯ ಅನ್ಯಮನಸ್ಕತೆ ಸಂಪೂರ್ಣವಾಗಿ ಮಾಯವಾದ ಹಾಗಿತ್ತು. ಗೆಳೆತನದ ಅಮೃತ ವರ್ಷಾವದಲ್ಲಿ ಆಕೆ ತನ್ನನ್ನು ತಾನೆ ಮರೆತುಹೋಗಿದ್ದಳು. ಭಾಗೀರಥಿ ಕೇಳಿದ ಎಲ್ಲ ಪ್ರಶ್ನೆಗಳಿಗೂ ಸಮರ್ಪಕ ಉತ್ತರ ಕೊಡುತ್ತಿದ್ದಳು.

ಮಾತಿಗೆ ಮಾತು ಬೆಳೆದು ಹಠಾತ್ತಾಗಿ ಸ್ಮಶಾನದ ವಿಚಾರ ಬಂತು. 'ಅಲ್ಲಿಗೆ ಹೋಗಿ ಆ ರೀತಿ ಕುಳಿತಿರಲು ಕಾರಣವೇನು?' ಎಂಬ ಪ್ರಶ್ನೆಯನ್ನೆ ಮತ್ತೆ ಎತ್ತಿದಳು ಭಾಗೀರಥಿ. ಸಾವಿತ್ರಿಗೆ ಈಗ ಮಾತ್ರ ನಿಜಕ್ಕೂ ಕಷ್ಟಕ್ಕಿಟ್ಟುಕೊಂಡಿತು. ಇದುವರೆಗೂ ತನ್ನೆದೆಯ ಮೂಲೆಯೊಂದರಲ್ಲಿ ಭದ್ರವಾಗಿರಿಸಿದ್ದ ಗುಟ್ಟಿನ ಗಂಟನ್ನು ಬಿಚ್ಚಲೇಬೇಕಾದ ಸಂದರ್ಭ ಬಂದಿತ್ತು. ಬಿಚ್ಚಿದರೂ ಕಷ್ಟ. ಬಿಚ್ಚದಿದ್ದರೂ ಕಷ್ಟ.

'ಹೇಳಾಕs ಬೇಕೇನವ್ವಾ' ಎಂದು ಕೇಳಿದಳು 'ಹೇಳಲಾರೆ' ಎಂದು ಸೂಚಿಸುತ್ತ

'ಹೂಂ. ಹೇಳಾಕ್ಸ ಬೇಕು. ಈ ಊರಿನವರಿಗ್ಯಾರಿಗೂ ನಿನ್ನ ಚಿಂತೆ ಇರದಿದ್ದರ ನನಗಾದರೂ ಇರಬ್ಯಾಡೇನು? ಎಲ್ಲಾ ಎಲ್ಲಾ ಹೇಳು ನನ್ನ ಮುಂದೆ. ಆಗೂ ಹಾಂಗಿದ್ದರ ನಾನಾದರೂ ಏನಾದರೂ ಮಾಡೇನು. ಸುಮ್ಮನs ನಿನ್ನಷ್ಟಕ್ಕ ನೀ ನರಳಿದರ ಏನಾಯ್ತು? ಹುಚ್ಚು ಹಿಡಿದು ಸತ್ತ ಹೋಗಾಕೇನು?—'

'ಹೂಂ. ಅಷ್ಟs ಅಂತ ಕಾಣಸ್ತೈತಿ ನನ್ನ ಹಣೀ ವ್ಯಾಲ ಬರದಿರೋದು. ಈಗ ಯಾರೂ ಏನೂ ಮಾಡೂಹಾಂಗಿಲ್ಲ ಭಾಗೂ. ನೀನೂ ಕೂಡ ಏನೂ ಮಾಡೂಹಾಂಗಿಲ್ಲ. ಆದದ್ದು ಆಗಿ ಹೋಯ್ತು....' ಎಂದು ನಿಡುಸುಯ್ದಳು ಸಾವಿತ್ರಿ.

'ಆದದ್ದಾವರೂ ಏನು?' ಎಂದು ಕಾತರಳಾಗಿ ಕೇಳಿದಳು ಭಾಗೀರಥಿ.

ತಲೆದಿಂಬಿನ ಮೇಲೆ ಎಡಗೈಯನ್ನೂರಗಿಸಿ ಅದರ ಮೇಲೆ ತಲೆಯನ್ನಿಟ್ಟು ಜಂತೆಯನ್ನು ಶೂನ್ಯವಾಗಿ ನಿಟ್ಟಿಸುತ್ತ ಸಾವಿತ್ರಿ ಹೇಳತೊಡಗಿದಳು.

'ನಾವು ಐದಾರು ವರ್ಷದವರಿದ್ದಾಗ ಸಾಲಿಗೆ ಹೋಗುತಿದ್ದೆವಲ್ಲ—ಆಗ ಮೂರನೇ ಯತ್ತೆಯೊಳಗೆ ಒಬ್ಬ ತೆಳ್ಳಗಿನ ಹುಡುಗ ಇದ್ದ ನೆನಪೈತೇನು ನಿನಗ?'

ತೆಳ್ಳಗಿನ ಹುಡುಗ! ಭಾಗೀರಥಿಯ ಕುತೂಹಲವೆಲ್ಲ ಕೆರಳಿ ನಿಂತಿತು. ಕೇಳಿದಳು.

'ಯಾವ ಹುಡುಗ? ಅವನ ಹೆಸರೇನು?'

‘ಸತ್ಯಪ್ಪ ಅಂತ. ತೆಳ್ಳಗೆ ಬಳ್ಳೀ ಹಾಂಗ ಇದ್ದ ನೋಡು. ಆ ಗಿರಪ್ಪನವರ ಮಗ. ಸಾಲಿಯೊಳಗಿನ ಹುಡುಗ ಹುಡುಗಿಯರೆಲ್ಲ ನಗ್ತಿದ್ದರಲ್ಲ ಅವನ್ನ ನೋಡಿ! ಬಡಿಗೆ ಇದ್ದಾಂಗಿದಾನ ಅಂತ — ಅವಗ ಚ್ಯಾಷ್ಟಿ ಮಾಡ್ತಿದ್ದರಲ್ಲ? ನೆನಪಿಲ್ಲೇನು ನಿನಗ?’

ನೆನಪಿರಲಿಲ್ಲ ಭಾಗೀರಥಿಗೆ. ನಿಜ. ಆದರೆ ಈಗ ನೆನಪಾಯಿತು. ತೆಳ್ಳಗೆ, ಬೆಳ್ಳಗೆ ಮಲ್ಲಿಗೆ ಬಳ್ಳಿಯ ಹಾಗಿದ್ದ ಆ ಚೆಂದಗಿನ ಹುಡುಗ ಸತ್ಯಪ್ಪ! ಹೋ! ಜ್ಞಾಪಕ ಬಂತು. ಒಂದು ಸಲ ‘ಸಾವಿತ್ರಿ ಸತ್ಯವಾನ್’ ಬಯಲಾಟದಲ್ಲಿ ಸತ್ಯವಾನನ ಪಾತ್ರ ವಹಿಸಿದ ಹುಡುಗ ಅಲ್ಲವೇ ಅವ? ಅಂದಿನಿಂದ ಹಳ್ಳಿಯವರೆಲ್ಲ ಅವನನ್ನು ‘ಸತ್ಯವಾನ’ ಎಂದೇ ಕರೆಯತೊಡಗಿದ್ದರು....

‘ಅದs ಸತ್ಯಪ್ಪ. ನಿನಗ ಗೊತ್ತಿರಬೇಕಲ್ಲ? ನಿನ್ನ ಮದುವೆಯಾದಾಗ ಅವ ಬೆಳಗಾಂವಿಯೊಳಗೆ ಹೈಸ್ಕೂಲಿನಾಗ ಕಲೀತಿದ್ದ. ಅಷ್ಟರಾಗs ಅವರಪ್ಪ ಸತ್ತರು. ಇಲ್ಲಿ ಮನಿಯೊಳಗ ಅವ್ವ ಒಬ್ಬಾಕೀನs ಇದ್ದಳು. ಅದಕ್ಕ ಸಾಲೀ ಬಿಟ್ಟು ಬಿಟ್ಟು ಊರಿಗೆ ಬಂದ. ಅವರ ಹೊಲಕ್ಕs ನಾನು ಕೂಲಿಗೆ ಹೋಗುತಿದ್ದೆ....

‘ಸತ್ಯಪ್ಪನ ಪ್ರಕೃತಿ ನೆಟ್ಟಗಿರಲಿಲ್ಲ. ಮೊದಲs ತೆಳ್ಳನ್ನ ಮೈ. ಪಟ್ಟಣದಾಗ, ಖಾನಾವಳಿಯೊಳಗ ಉಂಡು ಉಂಡು ಕಡ್ಡೀಹಾಂಗ ಆಗಿಬಿಟ್ಟಿದ್ದ. ಇಲ್ಲಿಗೆ ಬಂದ ಬಳಿಕ ಕೂಡಾ ಅವನ ಪ್ರಕೃತಿ ನೆಟ್ಟಗಾಗಲಿಲ್ಲ. ಅವರವ್ವಗ ಯಾವಾಗಲೂ ಅವಂದs ಚಿಂತಿ. ಅವ ಹೊಲ್ದದ ಕೆಲಸಾನೂ ಮಾಡೂದಕ್ಕಾಗುತಿರಲಿಲ್ಲ. ನಾವು ಆಳು ಮಕ್ಕಳಿಲ್ಲುದ ಹೀಂತಾ ಇರಬೇಕಾದರ ಅವ ಬಂದು ಗಿಡದ ನೆರಳಾಗ ಮಲಗಿಕೊಂಡು ಪುಸ್ತಕ ಓದುತಾ ಕೂಡುತಿದ್ದ. ಬ್ಯಾರೆ ಹುಡುಗಿಯರೆಲ್ಲ ಅವನ್ನ ನೋಡಿ ಚ್ಯಾಷ್ಟಿಮಾಡಿ ನಗತಿದ್ದರು. ಯಾರು ನಕ್ಕರೂ ಅವ ಸುಮ್ಮಗs ಇರಾಂವ. ಒಂದು ದಿನಾ ಆದರೂ ಯ್ಯಾರ ಮ್ಯಾಲೂ ಸಿಟ್ಟು ಮಾಡಲಿಲ್ಲ. ತನ್ನ ಪುಸ್ತಕ ಆಯ್ತು — ತಾನಾಯ್ತು. ಯಾವಾಗಲೂ ಅದs ಧ್ಯಾನ ಅವಗ....’

ಹೇಳುತ್ತ ಹೇಳುತ್ತ ಮಧ್ಯದಲ್ಲಿಯೇ ಮಾತು ನಿಲ್ಲಿಸಿ ಸಾವಿತ್ರಿ ಕೊಟಡಿಯ ಬಾಗಿಲಿನ ಕಡೆ ನಿಟ್ಟಿಸಿ ನೋಡಿದಳು. 'ಯಾರಿಗಾದರೂ ಕೇಳುತ್ತೈತೇನೋ ನಮ್ಮ ಮಾತು?' ಎಂದಳು.

'ಇಲ್ಲಿ ಆಟ್ಟದವಸ್ಯಾಲ ಯಾರೂ ಬರೂದಿಲ್ಲ. ಹೇಳು'

'ಇದುವರೆಗೂ ಯಾರ ಮುಂದೂ ಹೇಳಿಲ್ಲ ಇದನ್ನ ಭಾಗೂ- ಇವತ್ತ ನಿನ್ನ ಮುಂದ ಹೇಳ್ತಾ ಇದೀನಿ. ನಾ ಹೀಂಗ ಹೇಳಿದಿನಂತ ನೀ ಮಾತ್ರ ಬ್ಯಾರೆ ಯಾರ ಮುಂದೂ ಹೇಳಬಾರದು' ಎಂದಳು ಸಾವಿತ್ರಿ.

'ಇಲ್ಲ ಹೇಳೇ. ಒಂದು ಪಿಳ್ಳೆಗೂ ಹೇಳೋದಿಲ್ಲ.'

'ನಿನ್ನ ಮುಂದಾದರೂ ಹ್ಯಾಂಗ ಹೇಳೋದು ಅಂತನಿಸತಿತ್ತು ನನಗ. ಆದರೂ ಈಗ ಹೇಳಿದರೂ ಏನೂ ಚಿಂತಿಲ್ಲ. ಎಲ್ಲಾ ಮುಗಿದೇ ಹೋಗೈತಿ ಹೂ....ಮುಗಿದೇ ಹೋಗೈತಿ....ಆ ಸತ್ಯಪ್ಪ...'

'ಅವನ್ನ ಮಾಡಿಕೋಬೇಕು ಅಂತನಿಸತಿತ್ತೇನ ನಿನಗೆ?' ಎಂದು ಉತ್ಸುಕತೆಯಿಂದ ಕೇಳಿದಳು ಭಾಗೀರಥಿ.

ಬರೀ ಮಾಡಿಕೋಬೇಕು ಅಂತಲ್ಲ. ನನ್ನ ಪ್ರಾಣದಾಗ ಅವನ ಪ್ರಾಣಾನ ಮುಚ್ಚಿಟ್ಟುಕೋಬೇಕು, ಸಾಯೂತನಕ ನನ್ನ ಸೆರಗಿನೊಳಗೆ ಎದೀ ಹತ್ತಿರ ಅವನ್ನ ಬಚ್ಚಿಟ್ಟುಕೊಂಡು ಈ ಮಂದಿಯ ಚಾಷ್ಟಿಯಿಂದ ಅವನ್ನ ತಪ್ಪಿಸಬೇಕು ಅಂತನ್ನಿಸತಿತ್ತು ಭಾಗೂ. ಒಂದು ಸಾರಿ ಬೈಲಾಟದಾಗ ಅವ ಸತ್ಯವಂತನ ಪಾತ್ರ ಹಾಕಿದ್ದ-ನಾನೂ ನೀನೂ ಕೂಡೇ ನೋಡಿದ್ದೆವಲ್ಲ ಅವನ್ನ ?- ಅವತ್ತೇ ನನ್ನ ಮನಸಿನಾಗ ಬಂದಿತ್ತು. ಅವ ಸತ್ಯವಾನ್....ನಾ ಸಾವಿತ್ರಿ....ಅವನಿಗಂತೇ ನನ್ನ, ನನಗಂತೇ ಅವನ್ನ ಈ ಹಳ್ಳಿಯೊಳಗ ದೇವರು ಬೇಕಂತ ಹುಟ್ಟಿಸಿರಬೇಕಂತ ನನಗನ್ನಿಸಿತು. ಆ ಅರಸು ಮಗಳು ಸಾವಿತ್ರಿ [illegible]ದೇಶಾ ತಿರುಗಿ ಋಷಿಯ ಮಗನ್ನ ನೋಡಿದ ಕೂಡಲೆ ಅವಗ ಮರುಳಾಗಿ ಅವನ್ನೇ ಮಾಡಿಕೋಬೇಕು ಅಂತ ಗಟ್ಟಿ ಮಾಡಿದಳಲ್ಲ- ಆಗ ನಾನೂ ಗಟ್ಟಿ ಮಾಡಿಕೊಂಡಿದ್ದೆ ಮನಸಿನಾಗ- ಮದುವಿ ಆದರ, ಸತ್ಯವಾನನನ್ನೇ ಆಗಬೇಕು, ಇಲ್ಲಾ-ಹಾಂಗೇ ಇರಬೇಕು ಅಂತ! ಅವರ ಹೊಲದಾಗ ಕೆಲಸಾ ಮಾಡುವಾಗ ನನ್ನ ಮನಸು ಇನ್ನೂ ಗಟ್ಟಿ ಆತು. ಬ್ಯಾರೆ ಹುಡುಗೀರೆಲ್ಲಾ ಅವನ್ನ ನೋಡಿ ಚ್ಯಾಷ್ಟಿ ಮಾಡಿ

ನಕ್ಕಷ್ಟೂ ನನಗ ಅವ ಅಂದರ ಪ್ರೀತಿ ಬೆಳೀತಿತ್ತು. ತೋಟದಾಗಿನ ಗುಡಿಸಿಲ ಅಟ್ಟದವ್ಯಾಲ ಕೂತುಕೊಂಡು ಅವ ಆಗಾಗ ಯಾವುದೋ ಪುಸ್ತಕದಾಗಿನ ಹಾಡು ಹಾಡುತ್ತಿದ್ದ. ಎಷ್ಟು ಚೆಂದ ದನಿ ಅಂತೀಯಾ ಭಾಗೂ ಅವಂದು.... ಹಕ್ಕಿ ಹಾಡಿದ್ಹಾಂಗ! ತಂಬೂರಿ ತೀಡಿದ್ಹಾಂಗ! ಹಾಡುತಾ ಇದ್ದರ ತನ್ನ ತಾನಃ ಮರತುಬಿಡಾಂವ. ಸುತ್ತಮುತ್ತ ಕೆಲಸ ದಾಳುಗಳಿದ್ದಾರ ಅನ್ನೂದನ್ನೂ ಮರತುಬಿಟ್ಟು ಏರಿಸಿದ ದನಿಯಾಗ ಹಾಡಾಂವ. ಹಳ್ಳೀ ಮುಕ್ಕರಿವರು. ಅವ ಮೈಮರತು ಬಿಡೂವರ ಅರ್ಥ ಇವರಿಗೇನು ಗೊತ್ತಾದೀತು ಹೇಳು. ಸತ್ಯವಾನಗ ಹುಚ್ಚು ಹಿಡಿದೈತಿ-ಅದಕ್ಕಃ ಅವ ಹೀಂಗ ಹಾಡುತಾನ ಅಂತ ಪಿಸಿ ಪಿಸಿ ನಗುತಿದ್ದರು ಅವರೆಲ್ಲಾ. ನಾ ಮಾತ್ರ ಅವಗಾಗಿ ಹುಚ್ಚಿಯಾಗಿ ಹೋಗುತಿದ್ದೆ. ಜೋಳಿಯೊಳಗಿನ ಕಸ ತೆಗೆಯೂವನ್ನ ಬಿಟ್ಟುಬಿಟ್ಟು ಮನಸನ್ನೆಲ್ಲಾ ಅವನ ದನಿಯೊಳಗಃ ಬಿಟ್ಟು ಕೊಡುತಿದ್ದೆ....'

'ಎಷ್ಟು ದಿನ ನಡೀತು ಹೀಂಗ?'

'ಏಸಿಲ್ಲ ಅಂದರೂ ಒಂದು ವರ್ಷ ಆಗಿರಬೇಕು. ಅವ ಹಾಂಗಃ ಹಾಡುತಿದ್ದ. ನಾ ಹ್ಯಾಂಗೋ ಕೆಲಸ ಮಾಡುತಿದ್ದೆ. ನಡುವೆ ನನ್ನ ಮದುವೆ ಆಗಬೇಕಂತ ಯಾರ್ಯಾರೋ ಬಂದು ಅಜ್ಜೀನ ಕೇಳಿದರು. ಏನೇನೋ ಹೇಳಿ ತಪ್ಪಿಸಿಕೊಂಡೆ. ಮದುವೆ ಆಗಂತ ಅವರವ್ವನೂ ಅವಗ ಕಾಡಿದಳು. ಮದುವೀ ಮಾತು ತೆಗೆದರ ಎಲ್ಲಾದರೂ ಹೊರಟುಹೋಗ್ತೀನಿ ಅಂತ ಹೆದರಿಸಿಬಿಟ್ಟನಂತೆ ಅವ. ಇನ್ನು ಒಂದೆರಡು ವರ್ಷ ಹೋಗಲಿ ಅಂತ ಆಕೆ ಸುಮ್ಮನಾದಳು....'

'ಎಷ್ಟು ವರ್ಷ ವಯಸ್ಸು ಅವಗ ಆಗ?'

'ಇಪ್ಪತ್ತು ಇಪ್ಪತ್ತೊಂದು ಆಗ[illegible]ನೊ. ಅದಃ ಆಗ ಮೀಸಿ ಒಡೀತಿತ್ತು. ಕೆಂಪಗಿದ್ದ ತುಟೀವ್ಯಾಲ, ಚೂಪಾಗಿದ್ದ ಚಂದ ಮೂಗಿನ ಕೆಳಗ ಎಷ್ಟು ಮುದ್ದಾಗಿ ಕಾಣುತಿತ್ತವ್ವಾ ಆ ಹೊಸಾ ಹರೇದ ಮೀಸೀ! ಖಾದೀ ಅರಿವೆ ಅಂದರ ಬಹಳ ಪ್ರೀತಿ ಅವಗ. ಬೆಳ್ಳನ್ನ ಖಾದೀ ಅಂಗಿ ತೊಟ್ಟು, ಖಾದೀ ಪಾಯಿಜಾಮಾ ಹಾಕಿ, ಕ್ರಾಪುಕೂದಲು ತೀಡಿಕೊಂಡು, ಕೈಯಾಗ ಒಂದು ಪುಸ್ತಕ ಹಿಡಕೊಂಡು ಅವ ಹೊಲದ ಕಡೆ ಬರ್ತಾ

ಇದ್ದರ ನನ್ನ ಕಣ್ಣೂ ಮನಸೂ ಕೂಡೇ ಅವನ ಕಡೆ ಓಡುತಿತ್ತು. ಕೈಯಾಗಿನ ಕುರುಪಿ ಹಾಂಗs ಕೈಯಾಗ: ಇರತಿತ್ತು. ಗೆಳತಿಯರ್ಯಾರಿಗೂ ಗೊತ್ತಾಗದ ಹಾಂಗ ಕದ್ದು ಕದ್ದು ಅವನ್ನ' ನೋಡುತಿದ್ದೆ. ಎಷ್ಟು ನೋಡಿದರೂ ಸಾಕನ್ನಿಸತಿರಲಿಲ್ಲ ತಾಯೀ! ಹಾಂಗ: ಯಾವಾಗಲೂ ಅವನ ಆ ಮುದ್ದು ಮಾರೀನs ನೋಡ್ತಾ ಇರಬೇಕನ್ನಿಸುತಿತ್ತು. ಅಯ್ಯೋ, ಏನು ಹೇಳ್ಲಿ ನಿನಗ ಭಾಗೂ, ಎಂಥಾ ಹುಚ್ಚು ಅಂತೀ ಅದು! ಮೆಲ್ಲಮೆಲ್ಲಗ ಹೆಜ್ಜೀ ಹಾಕುತ್ತಾ ಅವ ಹುಲ್ಲಿನ ಮ್ಯಾಲ ಬರ್ತಾ ಇದ್ದರs- ಹುಲ್ಲಾಗಿ ಆದರೂ ಹುಟ್ಟಬಾರದಾಗಿತ್ತ-' ನಾನು-ಅಂದರ ಅವನ ಆ ಚಂದ ಕಾಲಾದರೂ ತಾಗುತಿತ್ತು ನನಗ—ಅಂತನ್ನಿಸತಿತ್ತು....'

'ಅವಗ ನೀ ಇಷ್ಟು ಮರುಳಾಗಿದ್ದಿ ಅನ್ನೂದು ಗೊತ್ತs ಆಗಲಿಲ್ಲೇನು ಅವಗ?'

'ಮೊದಮೊದಲು ಏನೂ ಗೊತ್ತಿರಲಿಲ್ಲ-ಅವನ ರೀತೀನs ಅಂಥಾದ್ದು. ಯಾರ ಕಡೇನೂ ಅವ ಲಕ್ಷ್ಯ ಕೊಡ್ತಿರಲಿಲ್ಲ. ಯಾರ ಕೂಡಲೂ ಹೆಚ್ಚು ಮಾತಾಡತಿರಲಿಲ್ಲ. ಯಾವಾಗಲಾದರೂ ಮಾತಾಡಬೇಕಾದರ ಒಂದೋ ಎರಡೋ ಮಾತು-ಮುತ್ತು ಉದುರಿದ ಹಾಂಗ. ಅಷ್ಟs. ಇನ್ನೇನೂ ಇಲ್ಲ. ಕೆಲಸಕ್ಕ ಬರ್‍ತಿದ್ದ ಹುಡುಗೀರನ್ನ ಒಂದು ಸಾರಿ ಕೂಡಾ ಕಣ್ಣೆಟ್ಟು ನೋಡಿದಾಂವಲ್ಲ ಅವ. 'ಹೆಸರೇನು ನಿನ್ನ?' ಅಂತ ಯಾರನ್ನೂ ಕೇಳಿದಾಂವಲ್ಲ. ನನ್ನ ಹೆಸರೂ ಕೂಡ ಅವಗ ಗೊತ್ತಿರಲಿಲ್ಲ. ಗೊತ್ತಾದ್ದು ಯಾವಾಗ ಗೊತ್ತೈತೇನು ನಿನಗೆ? ಕಡೀ ಗಳಿಗೆಯೊಳಗ. ಕಟ್ಟಕಡೀ ಗಳಿಗೆಯೊಳಗ.'

'ಕಡೀ ಗಳಿಗೆ? ಅಂದರ,' ಎಂದು ದಿಗಿಲುಗೊಂಡು ಕೇಳಿದಳು ಭಾಗೀರಥಿ.

'ಹೌದು. ಕಡೀ ಗಳಿಗೆ....ಈಗs ಬ್ಯಾಡ ಆ ಕೆಟ್ಟ ಸುದ್ದಿ. ಅಲ್ಲಿಗೇ ಬಂದೆ ತಡಿ' ಎಂದು ಸುಯ್ಯುತ್ತಾ ನುಡಿದು ಸಾವಿತ್ರಿ ಮುಂದುವರಿಸಿದಳು.

'ಮೂರು ವರ್ಷದ ಕೆಳಗ ಕಾಂಗರೆಸ್ ಚಳವಳಿ ನಡೀತಲ್ಲ-ಭಯಂಕರ ದೊಡ್ಡ ಚಳವಳಿ....ಗಾಂಧಿ, ಜವಾಹರಲಾಲ ಎಲ್ಲರನ್ನು ಹಿಡಿದು ಹಾಕಿತ್ತಲ್ಲ ಸರ್ಕಾರ....ಆಗ....'

'ಹೂಂ. ಆಗಸ್ಟ್ ಚಳವಳಿ!' ಎಂದು ದನಿಗೂಡಿಸಿದಳು ಸಾವಿತ್ರಿ.

'ಹಂ! ಅವ! ಆಗಸ್ಟ್ ಚಳವಳಿ. ಈ ಸರ್ಕಾರನ್ನ ಓಡಿಸಿಬಿಡ ಬೇಕು-ಇಲ್ಲಾ ಸಾಯಬೇಕು-ಅಂತ ಅಪ್ಪಣೆ ಕೊಟ್ಟಿದ್ದ ಗಾಂಧೀಮಹಾತ್ಮ. ನಿನಗೂ ಗೊತ್ತೈತಿಲ್ಲ-ನಮ್ಮೂರಿಗೆ ಚಳುವಳಿ ಅಂದರ ಏನೂ ಹೊಸದಲ್ಲ. ಕಾಂಗರೆಸ್ ಅಂದರ ಪಂಚಪ್ರಾಣ ಹಳ್ಳಿಯವರಿಗೆಲ್ಲಾ. ಇಲ್ಲೂ ಮಂದಿ ತಯಾರಾದರು. ಮೂರು ದಿನದೊಳಗಽ ಬೆಳಗಾವಿ ರಸ್ತೀಮ್ಯಾಲಿನ ತಾರ ತಂತಿ, ಕಂಭ ಎಲ್ಲಾ ಕಡಿದುಹಾಕಿದರು. ಪೂಲು ಒಡೆದರು. ಟಪಾಲು ಮೋಟರು ತರುಬಿ ಟಪಾಲು ಸುಟ್ಟುಬಿಟ್ಟರು. ಹಳ್ಳಿಯೊಳಗ ದಿನಾಗಲೂ ಮೆರವಣಿಗೇನು, ಸಭಾ ಏನು, ಹುರುಪೇನು-ಎಲ್ಲಾ ಜೋರಾಗಿ ನಡೀ ತಿತ್ತು. ಈ ಕೆಲಸಕ್ಕೆಲ್ಲಾ ಯಾರು ಮುಂದಾಗಿದ್ದರು ಗೊತ್ತೇನು ನಿನಗೆ?'

'ಸತ್ಯವಾನ?'

'ಹೂಂ. ಸತ್ಯವಾನನಽ! ಒಂದಽ ಒಂದು ವಾರದಾಗ ಎಷ್ಟು ಬದಲಾಗಿ ಹೋಗಿದ್ದ ಅವ. ಏನು ಹುರುಪು, ಏನು ಚಾಲಾಕು! ಒಂದು ಗಳಿಗೆ ಕೂಡಾ ಎಲ್ಲೂ ಕೂತಿರದೆ ಮಿಂಚನ್ಹಾಂಗ ಓಡಾಡಿ ಕೆಲಸ ನಡಸಿದ್ದ. ಹಾಡಿನ ಪುಸ್ತಕಾ ಎಲ್ಲೋ ಒಗದುಬಿಟ್ಟಿದ್ದ. ಹಾಡೂದಕ್ಕ ಪುರಸತ್ತಾ ದರೂ ಎಲ್ಲೀದು ಬರಬೇಕು? ನಾಲ್ಕು ಹಳ್ಳೀ ಮಂದಿ ಎಲ್ಲಾ ಇಲ್ಲಿ ಕೂಡ ತಿತ್ತು. ಅವರಿಗೆಲ್ಲಾ ನನ್ನ ಸತ್ಯವಾನ ಮುಖಂಡ ಆಗಿದ್ದನವ್ವಾ-ಜವಾ ಹರಲಾಲ ಆದಂಗ ಆಗಿದ್ದ....' ಹೆಮ್ಮೆಯಿಂದ ಗದಗದ ನಡಗುವ ದನಿ ಯಲ್ಲಿ ಈ ಮಾತು ಹೇಳಿ ಸಾವಿತ್ರಿ ಕ್ಷಣಕಾಲ ತಡೆದುಕೊಂಡಳು. ಅನಂ ತರ ಮತ್ತೆ ಪ್ರಾರಂಭಿಸಿದಳು.

'ಊರಾಗೆಲ್ಲಾ ಕಾಂಗರೆಸ್ ರಾಜ್ಯ ಆಗಿತ್ತು. ಗೌಡ ಕುಲಕರಣೀ ರೆಲ್ಲಾ ಸರಕಾರಕ್ಕೆ ರಾಜೀನಾಮೆ ಕೊಟ್ಟಿದ್ದರು. ಸತ್ಯವಾನನಽ ಈ ಊರಿನ ಅಧ್ಯಕ್ಷ ಆಗಿದ್ದ. ಒಂದು ವಾರದ ತನಕಾ ಇವರದ ರಾಜ್ಯ ನಡೀತಿತ್ತು. ಆ ಮ್ಯಾಲ ಬಂದರು ಪೋಲೀಸರು. ಅದುವರೆಗೂ ಅವರ ಪತ್ತೇನಽ ಇರಲಿಲ್ಲ.

'ಒಂದು ದಿನ ಬೆಳಗಿನಾಗ ಮಬ್ಬುಗತ್ತಲಿನಾಗ ತುಡುಗರು ಬಂದಂಗ ಬಂದರು ಪೋಲೀಸರು. ಅರವತ್ತು ಎಪ್ಪತ್ತು ಮಂದಿ. ಕೈಯಾಗ ಬಂದೂಕು

ಹಿಡಕೊಂಡು ಊರಿಗೆಲ್ಲಾ ಮುತ್ತಿಗೆ ಹಾಕಿದರು. ನಮ್ಮ ಗುಡಿಸಲಕ್ಕ ಅವರು ಬಂದಾಗ ನನಗ ಎಲ್ಲಾ ಎಲ್ಲಾ ಗೊತ್ತಾತು. ಇನ್ನು ಸತ್ಯಪ್ಪನ್ನ ಅವರು ಬಿಡೂದಿಲ್ಲ ಅನ್ನೂದೂ ತಿಳೀತು. ಹಾಂಗ ನಾ ಅವರ ಮನೀಗೆ ಓಡಿಹೋದೆ. ಅಷ್ಟರಾಗ ಅಲ್ಲಿ ದೊಡ್ಡ ಯುದ್ಧಾನ ನಡದಿತ್ತು.... ಪೋಲೀಸರ ಕೈಯಾಗ ಸಿಕ್ಕಬಾರದಂತ ನನ್ನ ದೊರಿ ಹಿತ್ತಲಬಾಗಿಲಿಂದ ಹೋಗ್ತಾ ಇದ್ದಾಗ ಗುಂಡು ಬಡಿದು ಬಿದ್ದಿದ್ದನವ್ವಾ! ಗುಂಡು ಬಡಿದು ಬಿದ್ದಿದ್ದ....ಮಗನ್ನ ತೊಡೀಮ್ಯಾಲ ಹಾಕ್ಕೊಂಡು ಅವರವ್ವ ಭೋರಂತ ಅಳ್ತಾ ಇದ್ದಳು....ಪೋಲೀಸರು ಬಂದ ಹಾಂಗ ಹೋಗಿಬಿಟ್ಟಿದ್ದರು. ಹ್ಯಾಂಗ ಹೇಳ್ಲಿ ಭಾಗೂ ನಿನಗೆ?....ನನ್ನ ರಾಜ....ನನ್ನ ಸತ್ಯವಾನ....' ಎಂದು ಸಾವಿತ್ರಿ ತಡೆದು ನಿಂತಳು. ಉಕ್ಕಿಬರುವ ಅಳುವನ್ನೆಲ್ಲ ಕತ್ತಿನ ಲ್ಲಿಯೆ ಅದುಕಿ ಹಿಡಿದು ರುದ್ಧ ಕಂಠದಿಂದ ಹೇಳತೊಡಗಿದಳು.

'ಎಡಮೋಳಿಗೆ ಬಡಿದಿತ್ತವ್ವಾ ಗುಂಡು....ಭರಭರನ ರಕ್ತ ಸುರೀತಾ ಇತ್ತು. ಕಣ್ಣು ಮುಚ್ಚುತ್ತಿತ್ತು. ಮತ್ತ ತಗೀತಿತ್ತು. ಎಂಥಾ ಸಂಕ ಟಾನ ಅದು ತಾಯೀ! ಆದರೂ ನನ್ನ ಸತ್ಯವಾನ್ ಎಂಥಾ ಧೈರ್ಯದವ ಅಂತೀಯಾ! ಅಳುತ್ತಿದ್ದ ತಾಯಿಯನ್ನ ಸಮಾಧಾನ ಮಾಡುತಿದ್ದ-'ದೇಶ ಕ್ಕಾಗಿ ಸಾಯ್ತಾ ಇದೀನಿ ನಾನು. ಕಣ್ಣೀರು ಹಾಕಬ್ಯಾಡವ್ವಾ ನೀನು. ನಗುನಗುತ್ತಾ ನನಗ ಆಶೀರ್ವಾದ ಮಾಡು.' ಅಂತ ಆಕೆಗೆ ಧೈರ್ಯ ಹೇಳತಿದ್ದ. ನಗಬೇಕಂತೆ! ಗಂಟಲು ಹರಿದುಕೊಂಡು ಅಳುವ ಹಾಂಗಾ ಗತಿತ್ತು ನಮ್ಮಿಬ್ಬರಿಗೂ! ಒಳಗ ತಕೊಂಡು ಬಂದು ಗಾಯಕ್ಕ ಅರಿವೀ ಕಟ್ಟಿದೆವು. ನಮಗ ತಿಳಿದಿದ್ದೆಲ್ಲಾ ಮಾಡಿದೆವು- ಏನು ಮಾಡಿದರೂ ರಕ್ತ ಹರಿಯೂದು ನಿಲ್ಲಲಿಲ್ಲ. 'ನನ್ನ ರಕ್ತ ಎಲ್ಲಾ ಕುಡಿ ದೇವರ. ಆದರ ನನ್ನ ಸತ್ಯವಾನನ ರಕ್ಷಾ ಉಳಿಸು' ಅಂತ ಬೋರಾಡಿ ಅತ್ತು ಕೊಂಡೆ. ನಾಚಿಕಿ ಗೀಚಿಕಿ ಎಲ್ಲಾ ಎಲ್ಲೋ ಓಡಿಹೋಗಿತ್ತು ಆಗ. ನನಗೂ ಅವಗೂ ಏನು ಸಂಬಂಧ ಅಂತ ಅವರವ್ವಗ ಅನ್ನಿಸಿದ್ದರೂ ಇದ್ದೀತು. ಆದರ ಆಗ ನನಗೆ ಅದ್ಯಾವದರ ಅರಿವೂ ಇರಲಿಲ್ಲ. ಅವನ್ನ ಎತ್ತಿ ತೊಡೀಮ್ಯಾಲ ಮಲಗಿಸಿಕೊಂಡು ಸೀರೆಯ ಸೆರಗಿನಿಂದ ತೋಳು

ಕಟ್ಟ ರಕ್ತ ಸಿಲ್ಲಿಸಬೇಕಂತ ಎಷ್ಟು ಮಾಡಿದರೂ ಏನೂ ಉಪಯೋಗ ಆಗಲಿಲ್ಲ....

'ಸೂರ್ಯ ಮೂಡಿ ಬರೂಪರೊಳಗಾಗಿ ಅವನ ಮೈಯಾಗಿನ ಶಕ್ತಿಯೆಲ್ಲಾ ಹೋಗೂದರಾಗಿತ್ತು ಸ್ವಲ್ಪ ಹೊತ್ತು ಹಾಂಗ ಬಿದ್ದುಕೊಂಡವ ಸಾಯೂದಕ್ಕ ಸ್ವಲ್ಪ ಮುಂಚೆ ನನ್ನ ಕಡೆ ನೋಡಿ 'ಯಾರವ್ವಾ ನೀನು?' ಅಂದ. ಹುಚ್ಚಿಯ ಹಾಂಗ ಅವನ ಮಾರಿಗೆಲ್ಲಾ ಮುತ್ತು ಕೊಡುತ್ತಾ 'ನಾ ನಿನ್ನಾಕಿ ಸತ್ಯವಾನ್. ನಿನ್ನ ಪಿರೀತೀ ಹೆಂಡತಿ. ನಿನ್ನ ಸಾವಿತ್ರಿ' ಅಂತ ಹೇಳಿದೆ. 'ನನ್ನ ಸಾವಿತ್ರಿ? ನನ್ನ ಹೆಂಡತಿ?' ಅಂದ. 'ಹೌದು. ಹೌದು. ನನ್ನ ಗಂಡ ನೀನು. ನಿನ್ನ ಹೆಂಡತಿ ನಾನು. ಅಯ್ಯೋ, ನಿನ್ನ ನೋಡಿದ ಮೊದಲ ಗಳಿಗೆಗೇ ನಿನ್ನನ ಮಾಡಿಕೋಬೇಕಂತ ಮನಸು ಮಾಡಿದ್ದೆನಲ್ಲೋ! ನನ್ನ ಪ್ರಾಣ ಎಲ್ಲಾ ನಿನ್ನಲ್ಲೇ ಇತ್ತಲ್ಲೋ! ದೇವರೇ, ನನ್ನ ಸತ್ಯವಾನನ್ನ ಉಳಿಸಿಕೊಡೋ!' ಅಂತ ಬೋರಾಡಿದೆ. ಕಡೀ ಗಳಿಗೆಯೊಳಗೂ ನಗುನಗುತಾ ನನ್ನ ನೋಡಿದ. 'ಸಾವಿತ್ರಿ? ನನ್ನ ಸಾವಿತ್ರಿ? ನನ್ನ ಸಾವಿತ್ರಿ? ನೀ ನನ್ನವಳ?' ಅಂದ. 'ಹೌದು. ಹೌದು. ನಾ ನಿನ್ನವಳ. ನನ್ನ ಕೈ ಬಿಡಬ್ಯಾಡೋ' ಅಂತ ಅಂಗಲಾಚಿದೆ. 'ಇವತ್ತೇನೋ ನಾ ಸಾಯಬಹುದು ಸಾವಿತ್ರಿ. ಅದಕ್ಕಾಗಿ ನೀ ಅಳಬ್ಯಾಡ. ಅಳಬ್ಯಾಡ ಅಂತ ಅವ್ವಗೂ ಹೇಳು. ಆಕೀನ್ನ ಸಮಾಧಾನ ಮಾಡು. ನಾ ಸಾಯ್ತಾ ಇರೂದಕ್ಕ ನನಗೇನೂ ಸಂಕಟ ಇಲ್ಲ. 'ಮಾಡು-ಇಲ್ಲಾ-ಮಡಿ' ಅಂತ ಅಪ್ಪಣೆ ಮಾಡಿದ್ದರು ಗಾಂಧೀಜೀ. ಮಾಡುವುದಕ್ಕೆ ಮೊದಲೇ ಹೀಂಗ ಗುಂಡು ಬಡಿದು ಸಾಯಬೇಕಾಗಿ ಬಂತು. ಈ ಪೋಲೀಸರ ಕೈಯಾಗಿಂದ ತಪ್ಪಿಸಿಕೊಂಡು ಹೋಗಿ ಗುಟ್ಟಾಗಿ ಚಳವಳಿ ನಡಿಸಬೇಕಂತ ವಿಚಾರ ಮಾಡಿದ್ದೆ. ಆಗಲಿಲ್ಲ ಅದು. ಈ ಗುಂಡು ಬಂತು....ನನ್ನ ಪ್ರಾಣ ತೆಗೀತು.... ಆದದ್ದಾಯ್ತು ಸಾವಿತ್ರೀ, ಅಳಬ್ಯಾಡ ನೀನು. ಅಳುವವರನ್ನ ನೋಡಿದರ ನನಗಾಗುವದಿಲ್ಲ. ಒರಸು ಆ ಕಣ್ಣೀರು. ಅವ್ವನ ಕಣ್ಣೀರನ್ನೂ ಒರಸು....' ಅಂದ. ಯಾರ ಕಣ್ಣೀರು ಯಾರು ಒರಸೂದವ್ವಾ! 'ಅಳಬ್ಯಾಡ' ಅಂತ ಅವ ಅಂದಷ್ಟೂ ಗಟ್ಟಿಯಾಗಿ ಅಳು ಬರತಿತ್ತು ನನಗ....

'ನನ್ನ ಸತ್ಯವಾನ್ ಉಳೀಲಿಲ್ಲವ್ವಾ... ಹಿಂದಿನ ಕಾಲದ ಸಾವಿತ್ರಿಯು ಸತ್ಯವಾನನ್ನ ಯಮ ಬಂದು ತಗೊಂಡು ಹೊರಟಿದ್ದಾಗ ಆಕೆ ಅವನ್ನ ತಡೆದು ಗಂಡನನ್ನ ಉಳಿಸಿಕೊಂಡು ಬಂದಿದ್ದಳಲ್ಲಾ - ಹಾಂಗ ನಾನೂ ಯಮರಾಜನ್ನ ಬೇಡಿಕೊಂಡೆ. 'ನನ್ನ ಸತ್ಯವಾನನ್ನ ಉಳಿಸಿಕೊಡಪ್ಪಾ!' ಅಂತ ಭಕ್ತಿಯಿಂದ ಕೇಳಿಕೊಂಡೆ. ಏನೂ ಉಪಯೋಗ ಆಗಲಿಲ್ಲ. ನನ್ನ ಸತ್ಯವಾನ್ ಉಳೀಲಿಲ್ಲವ್ವಾ... ಉಳೀಲಿಲ್ಲ...'

'ಅವನ್ನ ಹುಗಿದದ್ದು ಆ ಭಾವೀ ಹತ್ತರ ಏನು? ಅದಕ್ಕ ಅಂತ ಕಾಣಸ್ತೈತಿ ನೀ ಅಲ್ಲಿ ಹೋಗಿ ಕೂಡೂದು?' ಎಂದು ಕೇಳಿದಳು ಭಾಗೀರಥಿ.

'ಅದಕ್ಕs! ಇನ್ನ್ಯಾತಕ್ಕ? ಅಲ್ಲೇ, ಆ ಹಾಳು ಭಾವಿಯ ಹತ್ತಿರದಲ್ಲೇ ಅವನ್ನ ಹೂಳಿದರವ್ವಾ. ನನ್ನ ಸತ್ಯವಾನ್...ತೆಳ್ಳಗ ಬೆಳ್ಳಗ ಋಷಿ ಕುಮಾರನಿದ್ಹಾಂಗಿದ್ದ ನನ್ನ ಮುದ್ದಿನ ಸತ್ಯವಾನ್...ಅಲ್ಲಿ ಬಿದ್ದುಕೊಂಡಿ ದ್ದಾನ ಆ ಮಣ್ಣಾಗ...ಅಲ್ಲಿ ಹೋಗಿ ಕೂತುಕೊಂಡು ಅವನ ಗೋರೀನs ನೋಡ್ತಾ ಇದ್ದರ ಏನೋ ಸಮಾಧಾನ ಆಗುತ್ತೈತಿ. ಇಲ್ಲದಿದ್ದರ ನನ್ನ ಪ್ರಾಣದಾಗ ಪ್ರಾಣ ಇರೂದಿಲ್ಲ...'

'ಅವನಿಗಾಗಿ ನೀ ಹೀಗಾದೆ ಅನ್ನೋದು ಊರವರಿಗೆ ಗೊತ್ತಾಗಲಿ ಲ್ಲೇನು?'

'ಇಲ್ಲ. ಯಾರಿಗೂ ಗೊತ್ತಾಗಲಿಲ್ಲ. ಸತ್ಯವಾನ ಸತ್ತ ಬಳಿಕ ಒಬ್ಬನs ಮಗನ ಸಾವಿನಿಂದ ಎದಿ ಒಡಕೊಂಡು ಅವರವ್ವನೂ ಸತ್ತುಹೋ ದಳು ನಾಲ್ಕೈದು ತಿಂಗಳದಾಗ. ಆಕೆ ಯಾರ ಮುಂದೂ ಹೇಳಲಿಲ್ಲ. ನಾನೂ ಹೇಳಲಿಲ್ಲ. ಈಗ ಹೇಳ್ತಾ ಇರೂದು ನಿನ್ನೊಬ್ಬಳ ಹತ್ತರಲೇ! ಅಯ್ಯೋ...ಸತ್ಯವಾನ್...ನನ್ನ ಸತ್ಯವಾನ್...'

ಹೇಳುವುದನ್ನು ಮುಗಿಸಿ ಸಾವಿತ್ರಿ ಗೆಳತಿಯ ಮುಖವನ್ನೇ ವಿಚಿತ್ರ ವಾಗಿ ನಿಟ್ಟಿಸಿ ನೋಡತೊಡಗಿದಳು. ಅವಳ ದೃಷ್ಟಿಯಲ್ಲುಂಟಾಗುತ್ತಿದ್ದ ಮಾರ್ಪಾಟನ್ನು ಕಂಡು ಭಾಗೀರಥಿಗೆ ಮತ್ತೆ ದಿಗಿಲಾಯಿತು. ಸಾಯಂ ಕಾಲ ಸ್ಮಶಾನದಲ್ಲಿದ್ದಾಗ ಕಂಡುಬಂದ ಆ ವಿಲಕ್ಷಣ ಕಳೆಯೆ ಮತ್ತೆ ಏರಿ ಬರುತ್ತಿತ್ತು ಸಾವಿತ್ರಿಯ ಕಣ್ಣುಗಳಿಗೆ!

ಮಲಗಿದ್ದ ಭಾಗೀರಥಿಯನ್ನು ಬಿಗಿಯಾಗಿ ಅಪ್ಪಿಕೊಂಡು ಹೆದರಿಸುವ ದನಿಯಲ್ಲಿ ಸಾವಿತ್ರಿಯೆಂದಳು.

'ಯಮಧರ್ಮರಾಯಾ, ಕೊಡು ನನ್ನ ಸತ್ಯವಾನನ್ನ. ನನ್ನಾಂವ ಅವ. ಅವನಾಕಿ ನಾನು. ಅವನ್ನೊಬ್ಬನ್ನs ಒಯ್ದುಬಿಟ್ಟು ನನ್ನೊಬ್ಬಾಕೀನ್ನs ಹೀಂಗ ಬಿಡಬ್ಯಾಡ. ನನ್ನೂ ಒಯ್ಯಿ ಬೇಕಾದರ. ಈಗಲೇ ಒಯ್ಯಿ. ನನ್ನ ಇಲ್ಲೇ ಬಿಡೂದಾದರ ನನ್ನ ಸತ್ಯವಾನನನ್ನೂ ಕೊಟ್ಟುಬಿಡು ನನಗ. ಅವನಿಲ್ಲದ ನಾನು ಬದುಕೂಹಾಂಗಿಲ್ಲ. ನನ್ನ ಪ್ರಾಣ ಅವ. ಹೇಳು. ಕೊಡ್ತೀಯೋ ಇಲ್ಲೋ?'

ಬಾಲ್ಯದಿಂದ ಹೃದಯದಲ್ಲಿ ಬೆಳಸಿಕೊಂಡು ಬಂದಿದ್ದ ಅತಿ ಕೋಮಲ ಭಾವನೆಯೊಂದಕ್ಕೆ ಒಮ್ಮೆಲೆ ಬಿದ್ದ ನಿರಾಸೆಯ ಏಟಿನಿಂದ ಸಾವಿತ್ರಿಗೆ ಮನೋವಿಕಾರದ ರೋಗ ತಲೆದೋರಿದ್ದುದು ಸ್ಪಷ್ಟವಾಗಿತ್ತು. ಆ ವಿಕಾರದ ಮಬ್ಬಿನಲ್ಲಿ ಸಿಕ್ಕಿಬಿದ್ದಿರುವಾಗ ಆಕೆ ಇಂಥ ವಿಚಿತ್ರ ಮಾತುಗಳನ್ನಾಡುವುದೂ ಸ್ವಾಭಾವಿಕವೇ ಆಗಿತ್ತು. ಅವಳ ಹುಚ್ಚಿನ ಸ್ವರೂಪವೆಂಥದೆಂಬುದು ಈಗ ತಿಳಿದು ಬಂತು ಭಾಗೀರಥಿಗೆ. ಹುಚ್ಚಲ್ಲ ಅದು-ಬರೀ ವಿಕಾರ-ಕೊಂಚಕಾಲ ಪ್ರಯತ್ನಪಟ್ಟರೆ ಅದನ್ನು ತೆಗೆದುಹಾಕಬಹುದು. ಅದುವರೆಗೂ ಅವಳ ಒಲವಿನಂತೆ ನಡೆದುಕೊಂಡು ಅವಳ ಎದೆಯ ನೋವಿಗೆ ತಂಪನೆರೆಯುವುದೊಳ್ಳೆಯದು - ಮುಂದೆ ಅವಳು ನೆಟ್ಟಗಾಗುವುದೂ ಖಂಡಿತ-ಎನ್ನಿಸಿತು ಭಾಗೀರಥಿಗೆ. ತನ್ನನ್ನೆ ಯಮಧರ್ಮನೆಂದು ಭಾವಿಸಿ ಸಾವಿತ್ರಿ ಆಡಿದ ಮಾತು ಕೇಳಿ ಭಾಗೀರಥಿಗೆ ಭಯವೇನೂ ಆಗಲಿಲ್ಲ. ಸದ್ಯಕ್ಕಂತೂ ಅವಳನ್ನು ಸಾಂತ್ವನಗೊಳಿಸಿದರಾಯಿತೆಂದು ಬಗೆದು—

'ಕೊಡ್ತೇನೆ ಸಾವಿತ್ರೀ, ನಿನ್ನ ಸತ್ಯವಾನನನ್ನ ಮರಳಿ ಕೊಡ್ತೇನೆ. ಚಿಂತೆ ಮಾಡಬೇಡ. ಸುಮ್ಮನಿರು.' ಎಂದು ಭರವಸೆ ಕೊಟ್ಟಳು 'ಯಮಧರ್ಮ'ನ ಧಾಟಿಯಲ್ಲಿ!

ಎರಡು ಕೈಗಳನ್ನೂ ಹಣೆಗೊತ್ತಿಕೊಂಡು ಭಕ್ತಿಭಾವದಿಂದ ನಮಸ್ಕಾರ ಮಾಡುತ್ತ ಸಾವಿತ್ರಿ 'ಕೊಡ್ತೀಯಾ ಯಮದೇವಾ? ಯಾವಾಗ ಕೊಡ್ತೀ ನನ್ನಪ್ಪಾ?' ಎಂದಳು.

'ಯಾವಾಗ ಅನ್ನೂದನ್ನೀಗ ಹೇಳೂದಕ್ಕಾಗೂದಿಲ್ಲ. ಅಂತೂ

ಕೊಡ್ತೇನೆ. ಆದರ ಒಂದು ಮಾತು. ನಿನ್ನ ಸತ್ಯವಾನ ಸತ್ತಾಗ ಇದ್ದ ವಯಸ್ಸಿನಾಗ ಬರೂದಿಲ್ಲ ನಿನ್ನ ಹತ್ತರ. ಸಣ್ಣ ಕೂಸಿನ ರೂಪದಾಗ ಬರ್ತಾನ. ಹಾಂಗ ಅವ ಬಂದರ ನಿನಗ ಸಮಾಧಾನ ಆಗುತ್ತೈತೇನು?' ಎಂದು ತನ್ನ ಮುಂಬರುವ ಕಂದನನ್ನು ನೆನೆದು ಹೇಳಿದಳು ಭಾಗೀರಥಿ.

'ಹ್ಯಾಂಗಾದರೂ ಆಗಲಿ. ಅಂತೂ ನನ್ನ ಸತ್ಯವಾನ ನನ್ನ ಹತ್ತರ ಬರಲಿ. ನಿನಗ ಕಾಯಿ ಒಡಸ್ತೇನೆ. ನಿನ್ನ ಕಾಲಿಗೆ ಬೀಳ್ತೇನೆ' ಎಂದಳು ಸಾವಿತ್ರಿ.

ಅಂದು ಅವಳ ಹೃದಯ ಹಗುರಾದಹಾಗಾಯಿತು. ಮೂರು ವರುಷಗಳಿಂದ ಒಂದು ರಾತ್ರಿಯಲ್ಲೂ ಸಹ ಸರಿಯಾಗಿ ನಿದ್ರೆಯಿರಲಿಲ್ಲ ಸಾವಿತ್ರಿಗೆ. ಅಂದು ಗೆಳತಿಯ ಎದೆಗೆ ಎದೆ ಇಟ್ಟುಕೊಂಡು ಅವಳು ಹಾಯಾಗಿ ನಿದ್ರೆ ಮಾಡಿದಳು.

ಬೆಳಗಾಗುತ್ತಲೂ ಭಾಗೀರಥಿ ಸಾವಿತ್ರಿಯನ್ನು ತಬ್ಬಿಕೊಂಡು ಹೇಳಿದಳು.

'ನಿನ್ನೆ ರಾತ್ರಿ ಒಂದು ಕನಸು ಬಿದ್ದಿತ್ತು ಸಾವೂ. ಕನಸಿನಾಗ ಯಮಧರ್ಮರಾಜ ಬಂದಿದ್ದ. ಸಾವಿತ್ರಿಯ ಸತ್ಯವಾನನನ್ನ ನಿನ್ನ ಹೊಟ್ಟಿಯೊಳಗ ಹಾಕಿದ್ದೇನೆ. ಅವಳ ಸತ್ಯವಾನ ಅವ. ನೆನಪಿರಲಿ-ಅಂತ ಹೇಳಿಹೋದ...'

ಈ ಕನಸಿನ ಸುದ್ದಿಯನ್ನು ಸಾವಿತ್ರಿ ತಕ್ಷಣ ನಂಬಿಬಿಟ್ಟಳು. 'ನಿನ್ನ ಹೊಟ್ಯಾಗ ಹುಟ್ಟತಾನೇನಽ ನನ್ನ ಸತ್ಯವಾನ್? ಇನ್ನೂ ಚೆಲೋದೇ ಆತು. ನೀ ಬಸುರಿ ಅನ್ನೂದು ಇದುತನಕಾ ಗೊತ್ತಿರಲಿಲ್ಲಲ್ಲ ನನಗ. ಎಷ್ಟು ತಿಂಗಳತ ಈಗ?' ಎಂದಳು.

'ಐದು ತಿಂಗಳು'

'ಇನ್ನೈದು ತಿಂಗಳಿನೊಳಗಽ ನನ್ನ ಸತ್ಯವಾನ್ ಬರ್ತಾನ ಹೌದಲ್ಲೊ?'

'ಹೂಂ. ಅಲ್ಲೀತನಕಾ ತಡಿಯುವ್ವಾ!'

'ತಡೀತೇನೆ ಭಾಗೂ, ತಡೀತೇನೆ' ಎಂದಳು ಸಾವಿತ್ರಿ ವಿಲಕ್ಷಣ ಮಧುರ ನಗು ಬೀರುತ್ತ!

ಗೆಳತಿಯ ಕಣ್ಣುಗಳ ಕಡೆ ದೃಷ್ಟಿ ಹೊರಳಿಸಿದಳು ಭಾಗೀರಥಿ. ಅಲ್ಲಿನ ಆ ವಿಲಕ್ಷಣ ಕಳೆ ಇನ್ನೂ ಹಾಗೇ ಇತ್ತು! ಮಾಯವಾಗಿರಲಿಲ್ಲ.

೪

ಅನಂತರದ ಎಂಟು ದಿನಗಳ ಕಾಲ ಸಾವಿತ್ರಿ ಒಂದು ವಿಲಕ್ಷಣ ಮನೋರಾಜ್ಯದಲ್ಲಿ ಓಡಾಡುತ್ತಿದ್ದಳು. ನಿಜಕ್ಕೂ ತನ್ನ ಸತ್ಯವಾನ ಭಾಗೀರಥಿಯ ಹೊಟ್ಟೆಯಿಂದ ಹುಟ್ಟಿ ಬರುವನೆಂದೇ ಅವಳು ನಂಬಿಕೊಂಡಿದ್ದಳು. ಎಲ್ಲಿಲ್ಲದ ಉತ್ಸಾಹದಿಂದ ಮನೆಗೆಲಸ ಮಾಡತೊಡಗಿದ್ದಳು. ಅಜ್ಜಿಯನ್ನು ಸರಿಯಾಗಿ ಉಪಚರಿಸತೊಡಗಿದ್ದಳು. 'ಸಾವಿತ್ರಿಯ ಹುಚ್ಚು ಬಿಟ್ಟಿರ ಬೇಕು' ಎಂದು ಊರಿನ ಜನ ಆಡಿಕೊಳ್ಳಲಾರಂಭಿಸಿದ್ದರು. ಅಜ್ಜಿಗೂ ಸಹ ಹಾಗೇ ಅನ್ನಿಸಿತ್ತು. ಆ ಸಂತೋಷದ ಪರಿಣಾಮವಾಗಿ ಅವಳಿಗೂ ಕೊಂಚಕೊಂಚವಾಗಿ ಗುಣವಾಗತೊಡಗಿತ್ತು.

ಒಂಬತ್ತನೆಯ ದಿನ...

ನಿತ್ಯದಂತೆ ಅಂದು ಸಾಯಂಕಾಲವೂ ಸಾವಿತ್ರಿ ಭಾಗೀರಥಿಯನ್ನು ನೋಡಿಕೊಂಡು ಬರಲು ಅವರ ಮನೆಗೆ ಹೋದಳು.

ನಿತ್ಯವೂ ಪಡಸಾಲೆಯಲ್ಲಿನ ತೂಗುಮಣೆಯ ಮೇಲೆ ಕುಳಿತುಕೊಂಡು ಉಯ್ಯಾಲೆಯಾಡುತ್ತಿರುವ ಭಾಗೀರಥಿ ಅಂದು ಅಲ್ಲಿರಲಿಲ್ಲ.

ಅಟ್ಟದಮೇಲಿನ ಕೊಟಡಿಯಲ್ಲಿ ಕುಳಿತು ಏನನ್ನಾದರೂ ಓದುತ್ತಿರುವಳೊ ಏನೊ ಎಂದುಕೊಂಡು ಸಾವಿತ್ರಿ ಮೆಟ್ಟಲುಗಳನ್ನೇರಿ ಮೇಲೆ ಹೋಗತೊಡಗಿದಳು.

ಅಷ್ಟರಲ್ಲಿಯೆ ಅಟ್ಟದಿಂದ ಭಾಗೀರಥಿಯ ತಾಯಿ ಇಳಿದು ಬರುತ್ತಿದ್ದವಳು ಸಾವಿತ್ರಿಯನ್ನು ಕಂಡಕೂಡಲೆ 'ಏ, ನೀ ಅಲ್ಲಿಗೆ ಹೋಗಬ್ಯಾಡ. ನಡೀ ಕೆಳಗೆ.' ಎಂದು ಕೋಪದಿಂದ ಕೂಗಿಕೊಂಡಳು.

'ಯಾಕವ್ವಾ ಹೀಂಗ ಮಾತಾಡತೀ?' ಎಂದು ಅಳುಮೋರೆ ಮಾಡಿ ಕೇಳಿದಳು ಸಾವಿತ್ರಿ.

'ಇನ್ನು ಹ್ಯಾಂಗ ಮಾತಾಡಬೇಕು ನಿನ್ನಂಥಾ ಪಿಶಾಚಿಯ ಕೂಡ?

ನಿನ್ನಿಂದಽ ನನ್ನ ಮಗಳಿಗೆ ಹೀಂಗಾತು. ಅವತ್ತು ನಿನ್ನ ಹುಡುಕೂದಕ್ಕ ಸುಡುಗಾಡಿಗೆ ಬಂದಿದ್ದಳಂತಲ್ಲ-ಆ ಹಾಳು ಗಾಳಿ ಬಡಿದು ನನ್ನ ಮಗಳಿಗೆ ಅರಿಷ್ಟ...'

'ಏನಾತವ್ವಾ ಭಾಗೂಗೆ?'

'ಅವಳಿಗೇನಾಗಬೇಕಂತೀ ಹಾಳು ಮಾರಿಯುವಳೇ! ಆಕಿಗೇನೂ ಆಗಲಿಲ್ಲ ಪುಣ್ಯಾತ್ಮ. ಹೊಟ್ಟಿ ಅಷ್ಟಽ ಇಳಿದುಃಹೋತು. ನಡೀ. ನೀ ಇನ್ನು ನಮ್ಮ ಮನ್ಯಾಗ ಕಾಲು ಹಾಕಬ್ಯಾಡ!' ಎಂದು ಗದರಿಕೊಂಡಳು ಭಾಗೀ ರಥಿಯ ತಾಯಿ.

ಹೊಟ್ಟಿ ಇಳಿಯಿತು!- ಗುಂಡು ಒಡಿದ ಹಾಗೆ ಸಾವಿತ್ರಿಯ ಎದೆಗೆ ಬಡಿಯಿತು ಆ ಮಾತು. ಅವಳ ಪ್ರಾಣವನ್ನೆಲ್ಲ ಹಿಡಿದು ನಿಲ್ಲಿಸಿದ್ದ ಒಂದೇ ಒಂದು ಆಶಾ ತಂತುವನ್ನೂ ಅದು ಹರಿದುಹಾಕಿತು. 'ಹೊಟ್ಟಿ ಇಳೀತು? ಇನ್ನು ನನ್ನ ಸತ್ಯವಾನ್ ಬರೂದಿಲ್ಲ ಹಾಂಗಾದರಽ? ಅಯ್ಯೋ, ನನ್ನ ಸತ್ಯವಾನ್...' ಎಂದು ಕೂಗಿಕೊಂಡು ಸಾವಿತ್ರಿ ಮೆಟ್ಟಿಲುಗಳ ಮೇಲೆ ಕುಸಿದುಬಿದ್ದಳು. ಭಾಗೀರಥಿಯು ತಾಯಿ ಹಿಡಿಯುವುದರೊಳಗಾಗಿಯೆ ಅವಳ ಶರೀರ ಮೆಟ್ಟಿಲುಗಳ ಮೇಲಿಂದ ದಡದಡನೆ ಉರುಳಿ ದೂರ ಹೋಗಿ ಬಿದ್ದಿತ್ತು. ಬಿದ್ದ ಏಟಿಗೆ ತಲೆಯೊಡೆದು ರಕ್ತ ಧಾರೆಯಾಗಿ ಸುರಿಯತೊಡಗಿತ್ತು.

ಸಹಿಸಲಾಗದ ನಿಶ್ಶಕ್ತಿಯಿಂದಾಗಿ ಅಟ್ಟದ ಮೇಲೆ ಮಲಗಿದ್ದ ಭಾಗೀ ರಥಿಗೆ ಸಪ್ಪು ಕೇಳಿಸಿತು. ಸಾವಿತ್ರಿಯ ದನಿಯೂ ಅರ್ಥವಾಯಿತು. ಅನಾಹುತವಾಯಿತೆಂಬುದು ಗೊತ್ತಾಗುತ್ತಲೂ ಆಕೆ ಹುಚ್ಚು ಹಿಡಿದವರಂತೆ ಆಕ್ರೋಶ ಮಾಡುತ್ತಾ ಹಾಸುಗೆ ಬಿಟ್ಟೆದ್ದು ಧಾವಿಸಿ ಬಂದಳು—'ಸಾವಿತ್ರೀ, ನನ್ನ ಸಾವಿತ್ರೀ,' ಎಂದು ಕೂಗುತ್ತ.

ಗೆಳತಿಯ ಕಾತರದ ಕರೆಗೆ ಓ ಕೊಡಲು ಅಲ್ಲಿರಲಿಲ್ಲ ಸಾವಿತ್ರಿ.

ಅವಳಾಗಲೆ ತನ್ನ ಸತ್ಯವಾನನನ್ನು ಹಿಂಬಾಲಿಸಿಕೊಂಡು ಹೋಗಿದ್ದಳು.

ಫೆಬ್ರುವರಿ ೧೯೪೭

# ಬಲಿ !

೧೯೪೨ ಆಗಸ್ಟ್ ಹನ್ನೊಂದು

ಮನಸ್ಸು ತೊಡಗಲೊಲ್ಲದು ಯಾವುದರಲ್ಲೂ.

ಯಾವ ಪುಸ್ತಕದಲ್ಲೂ!

ಕೆಲಸಕ್ಕೆ ಬಾರದ ಈ ಪಠ್ಯಪುಸ್ತಕಗಳು ಇಂದು ನಮ್ಮ ಹೃದಯಗಳನ್ನೆಳೆಯುವುದಾದರೂ ಹೇಗೆ ಸಾಧ್ಯ?

ಕಾಶ್ಮೀರದಿಂದ ಕನ್ಯಾಕುಮಾರಿಯ ವರೆಗೆ, ಕರಾಚಿಯಿಂದ ಕಲಕತ್ತಾದ ವರೆಗೆ, ಈ ತುದಿಯಿಂದ ಆ ತುದಿಯ ತನಕ, ಆ ಮೂಲೆಯಿಂದ ಈ ಮೂಲೆಯ ತನಕ ಹೊತ್ತಿಕೊಂಡು ಉರಿಯುತ್ತಿದೆ ಹಿಂದೂಸ್ಥಾನ. ಬ್ರಿಟಿಷ್ ಸಾಮ್ರಾಜ್ಯದ ಭವ್ಯ ಕಟ್ಟಡ ಬೂದಿ ಬೂದಿಯಾಗಿ ಹೋಗತೊಡಗಿದೆ ಈ ಉರಿಯಲ್ಲಿ. ದೂರದ ಹಿಮಾಚಲದ ಗಿರಿ ಶಿಖರಗಳಿಂದಲೂ ಅಟ್ಟಹಾಸದ ದನಿ ಮೊಳಗತೊಡಗಿದೆ. ವಿಂಧ್ಯಾಚಲದ ಬೆಟ್ಟಗಳ ತುದಿಯಿಂದಲೂ ಗುಡುಗಿನ ದನಿ ಮೊರೆಯತೊಡಗಿದೆ. ನೂರು ವರ್ಷಗಳ ಆಲಸ್ಯವನ್ನು ತೊಡೆದು ನಾಡೆಲ್ಲ ಎದ್ದು ಗರ್ಜಿಸತೊಡಗಿದೆ.

೧೯೪೨ ಆಗಸ್ಟ್ ಒಂಬತ್ತು!

'ತೊಲಗಾಚೆ, ಓ ಬ್ರಿಟಿಷಾ, ತೊಲಗಾಚೆ!'

'ತೊಲಗು ನಮ್ಮ ದೇಶ ಬಿಟ್ಟು!'

'ಗಂಟು ಮೂಟೆ ಕಟ್ಟಿಕೊಂಡು ತೊಲಗು! ಮೆಡಲ್‌ಗಳನ್ನು ಕಟ್ಟಿಕೊಂಡು ತೊಲಗು! ರಾವ್ ಬಹದ್ದೂರ್ ದಿವಾನ್ ಬಹದ್ದೂರ್, ಸರ್‌ಗಿರಿಗಳನ್ನೆಲ್ಲಾ ಹೊತ್ತುಕೊಂಡು ತೊಲಗು! ನಿಲ್ಲಬೇಡಿಲ್ಲಿ ಇನ್ನು. ನಮ್ಮದೀ ದೇಶ! ನಮ್ಮ ಹಿಂದೂಸ್ಥಾನ! ನಾವಿಂದು ಸ್ವತಂತ್ರರು! ಇನ್ಕಿಲಾಬ್ ಜಿಂದಾಬಾದ್' ಎಂದು ಭಾರತದ ನಲವತ್ತು ಕೋಟಿ ಕಂಠ ಒಂದೆ ದನಿಯಲ್ಲಿ ಘೋಷಿಸುತ್ತಿದೆ.

'ಕ್ವಿಟ್ ಇಂಡಿಯಾ! ಕ್ವಿಟ್ ಇಂಡಿಯಾ!' ಭಾರತದ ಗಾಳಿಯೂ ಸಹ ಇದೇ ಮಂತ್ರವನ್ನು ಸುರುತ್ತಿದೆ.

ಗಾಂಧೀ-ನೆಹರೂ ಬಂಧನ—ದೇಶಾದ್ಯಂತವೆಲ್ಲ ಹರತಾಳ—ಜನರ ಪ್ರತಿಭಟನೆ—ಶಾಲೆ ಕಾಲೇಜು ವಿದ್ಯಾರ್ಥಿಗಳ ಮುಷ್ಕರ -ಭೀಕರ ಸಂಗ್ರಾಮಕ್ಕಾರಂಭವಾಗಿದೆ.

ಸ್ವಾತಂತ್ರ್ಯದ ಕೊನೆಯ ಸಂಗ್ರಾಮ!

'ಷುರೂ ಹುವಾ ಹೈ ಜಂಗ್ ಹಮಾರಾ!'

ಕಿವಿಗಳಿಲ್ಲವೇ ನಮಗೆ? ಹೃದಯಗಳಿಲ್ಲವೇ ನಮಗೆ ? ಭಾವನೆಗಳಿಲ್ಲವೇ ನಮಗೆ! ತಾಯಿನಾಡಿನ ಬಗ್ಗೆ ಪ್ರೀತಿಯಿಲ್ಲವೇ ನಮಗೆ? ನಮಗಾಗಿ, ನಮ್ಮ ದೇಶಕ್ಕಾಗಿ ಸರ್ವಸ್ವವನ್ನು ತ್ಯಾಗಮಾಡಿದ ಗಾಂಧೀ ಜವಾಹರರ ಬಗ್ಗೆ ಆದರವಿಲ್ಲವೇ ನಮಗೆ? ಅವರ ಬಂಧನದ ಸುದ್ದಿ ತಿಳಿದು, ಅವರ ವೀರ ಆವಾಹನದ ಕರೆ ಕೇಳಿ ದೇಶದ ರಕ್ತವೆಲ್ಲ ಕುದಿದೆದ್ದ ಹಾಗೆ ನಮ್ಮೆಲ್ಲರ ಬಿಸಿ ನೆತ್ತರವೂ ಕುದಿಯುತ್ತಿದೆ!

"ಗಂಡು ಹೆಣ್ಣು, ಕೂಸು ಕುನ್ನಿ, ವಿದ್ಯಾರ್ಥಿ, ವಿದ್ಯಾರ್ಥಿನಿ, ಅವರಿವರೆಂದೇನು, ಭಾರತೀಯರೆಲ್ಲ ಸೇರಬೇಕು ಈ ಸಂಗ್ರಾಮದಲ್ಲಿ. ನಾವು ಮಾಡಬೇಕು. ಇಲ್ಲ—ಮಡಿಯಬೇಕು. ಇದೇ ನಮ್ಮ ಕೊನೆಯ ಹೋರಾಟ' ಗಾಂಧೀ ಮಹಾತ್ಮನ ಆ ಅಮರ ಸಂದೇಶ!

ನಮ್ಮ ನಾಡಿನ ಭಾಗ್ಯವಿಧಾತನ ಈ ಸಂದೇಶ ಒಂದೆ ಸಮನೆ ನಿನದಿಸುತ್ತಿದೆ ನಮ್ಮ ಕಿವಿಗಳಲ್ಲಿ.

ಪುಸ್ತಕ ಓದುವುದು?

ಹೇಗೆ ತಾನೆ ಓದಲು ಸಾಧ್ಯ ಇಂಥ ಸನ್ನಿವೇಶದಲ್ಲಿ?

ಇಂದು ಓದಿಗೆ ತಿಲಾಂಜಲಿ!

ಹೈಸ್ಕೂಲಿಗೆ ತಿಲಾಂಜಲಿ!

ಮ್ಯಾಟ್ರಿಕ್ಕಿಗೆ ತಿಲಾಂಜಲಿ!

ಎರಡು ಹಗಲು, ಎರಡು ರಾತ್ರಿ ಸತತವಾಗಿ ಯೋಚಿಸಿ ನಾವಿಂದು ಈ ನಿರ್ಧಾರಕ್ಕೆ ಬಂದಿದ್ದೇವೆ. ಇನ್ನು ಯಾವ ಶಕ್ತಿಯೂ ನಮ್ಮ ನಿಶ್ಚಯವನ್ನು ಮುರಿಯಲಾರದು.

ತಂದೆ? ಅವರಿಗೆ ಈ ವಿಚಾರ ಗೊತ್ತಾದರೊ? ಆದರೆ ಆಗಲಿ. ಕೆಲ ದಿನಗಳ ವರೆಗೆ ಕೋಪಿಸಿಕೊಂಡಿರುತ್ತಾರೆ. ಮುಂದೆ ನನ್ನನ್ನು ಮನೆಗೂ

ಸೇರಿಸಲಿಕ್ಕಿಲ್ಲ. ಅಷ್ಟೇ ಅಲ್ಲವೆ ಅವರು ಮಾಡುವುದು ನನಗೆ? ಅವರು ಮುನಿದುಕೊಂಡಾರೆಂಬ ಸಂದೇಹದಿಂದ ನನ್ನ ಕರ್ತವ್ಯವನ್ನು ನಾನು ತ್ಯಜಿಸಬೇಕೇ?

ಇಲ್ಲ!

ಕರ್ತವ್ಯದ ದಾರಿಯಿಂದ ನಾನೆಂದೂ ಕದಲುವುದಿಲ್ಲ!

ಶಂಕರೂ ಹೆಮ್ಮೆಯಿಂದ ಹೇಳುತ್ತಾನೆ!

"ಸ್ವಾತಂತ್ರ್ಯಕ್ಕಾಗಿ ಸಂತೋಷದಿಂದ ಪ್ರಾಣಾರ್ಪಣ ಮಾಡಿದ ವೀರಾಧಿವೀರರ ನಾಡಿನಲ್ಲಿ ನಾವು ಹುಟ್ಟಿದ್ದೇವೆ. ಈಗ ನಾವು ಹೇಡಿಗಳಾಗಬಾರದು. ನಮ್ಮ ಪೂರ್ವಜರ ಉಜ್ವಲ ಇತಿಹಾಸಕ್ಕೆ, ಅವರ ಸ್ಮರಣೆಗೆ ಕಳಂಕ ಹಚ್ಚಬಾರದು!"

ಎಷ್ಟು ಸ್ಫೂರ್ತಿದಾಯಕವಾಗಿದೆ ಶಂಕರೂ ಮಾತು!

ಇಂದು ಭಾರತದ ಪ್ರತಿಯೊಬ್ಬ ತರುಣನೂ ಒಬ್ಬೊಬ್ಬ ಅಭಿಮನ್ಯುವಾಗಬೇಕು. ಬ್ರಿಟಿಷ್ ಸಾಮ್ರಾಜ್ಯಶಾಹಿ ರಚಿಸಿದ ಈ ಚಕ್ರವ್ಯೂಹದಲ್ಲಿ ಧೈರ್ಯದಿಂದ ನುಗ್ಗಬೇಕು. ಕುರುಕ್ಷೇತ್ರದಲ್ಲಿ ಅಭಿಮನ್ಯು ಮಡಿದಂತೆಯೇ ಸರ್ಕಾರದ ಪಾಶವೀಶಕ್ತಿಯ ಅತ್ಯಾಚಾರದಿಂದ ನಾವೂ ಮಡಿಯಬೇಕಾಗಿ ಬಂದೀತು. ನಾವು ಸುರಿಸಿದ ರಕ್ತದಲ್ಲಿ ಸ್ವಾತಂತ್ರ್ಯದ ಗಿಡ ಬೆಳೆದು ಬಂದೀತು!

ಸಮರಕ್ಕೆ ಹೊರಡುವ ಕಾಲ ಇದು!

'ಉತ್ತರೆಯರ ಮೋಹಕ್ಕೆ ಕಟ್ಟುಬಿದ್ದು ಹಿಂದುಳಿಯುವವರೆಲ್ಲ ಹೇಡಿಗಳು!'

ಎಷ್ಟು ದೃಢವಾಗಿದೆ ನಮ್ಮ ಶಂಕರೂ ನಿರ್ಧಾರ! ಎಂಥ ವಜ್ರಹೃದಯ ಅವನದು! ಎಂಟು ದಿನಗಳ ಹಿಂದೆ ಎಂಥ ಸವಿಗನಸು ಕಟ್ಟುತ್ತಿದ್ದ! ಬರಲಿರುವ ಬಾಳ ಜೊತೆಗಾತಿಯನ್ನು ನೆನೆದು ಅವಳ ಸಾನ್ನಿಧ್ಯಕ್ಕಾಗಿ ಹೇಗೆ ಹಂಬಲಿಸುತ್ತಿದ್ದ! ಹುಡುಗಿಯನ್ನು ನೋಡಿ ಬಂದಂದಿನಿಂದ ಹಗಲಿರುಳು ಅವಳದೇ ಧ್ಯಾನ. ಅವಳ ಭಾವಚಿತ್ರವಂತೂ ಅವನ ಎದೆಯ ಬಳಿಯಲ್ಲೇ. ಪರೀಕ್ಷೆ ಮುಗಿದ ತಕ್ಷಣ ಮದುವೆಯಾಗಬೇಕಾಗಿತ್ತು.

ಎಷ್ಟು ಆತುರದಿಂದ ಕಾಯುತ್ತಿದ್ದ ಆ ಪರೀಕ್ಷೆಗಾಗಿ!-ಪರೀಕ್ಷೆ ಮುಗಿದ ನಂತರದ ಆ ಸವಿದಿನಕ್ಕಾಗಿ!

ಪರೀಕ್ಷೆ!

ಅವನು ನಿರೀಕ್ಷಿಸಿದುದಕ್ಕಿಂತಲೂ ಹಠಾತ್ತಾಗಿ ಬೇಗನೆ ಬಂದು ಬಿಟ್ಟಿತು ಪರೀಕ್ಷೆ!

ಎಂಥ ಭೀಕರ ಪರೀಕ್ಷೆ ಅದು!

ಬುದ್ಧಿ, ಮನಸ್ಸು, ಹೃದಯ, ಶಕ್ತಿ-ಎಲ್ಲವುಗಳ ಪರೀಕ್ಷೆ ಅದು!

ಶ್ರೀಮಂತ ತಂದೆ ತಾಯಿಗಳಿಗೆ ಏಕಮಾತ್ರ ಪುತ್ರ, ತಂದೆಯ ಅಭಿಮಾನದ ಮೂರ್ತಿ, ತಾಯಿಯ ಕಣ್ಣಬೊಂಬೆ, ಆರೋಗ್ಯ ಶಾಲಿ, ಸುರೂಪಿ ಸುಸ್ವಭಾವಿ-ಶಂಕರರೂ ಈ ಎಲ್ಲ ಅನುಕೂಲತೆಗಳನ್ನು ಮರೆತುಬಿಟ್ಟು, ಬರಲಿರುವ ಜೊತೆಗಾತಿಯ ವಿಚಾರವನ್ನೂ ಮನಸ್ಸಿನಿಂದ ಕಿತ್ತುಹಾಕಿ ಸ್ವಾತಂತ್ರ್ಯ ಸಂಗ್ರಾಮದ ಭೀಕರ ರಣರಂಗಕ್ಕೆ ಧುಮುಕುತ್ತಿದ್ದಾನೆ!

ಎಂಥ ಕಠಿನ ಪರೀಕ್ಷೆಯಲ್ಲಿ ಪಾಸಾದನಲ್ಲ ನನ್ನ ಶಂಕರೂ!

ಅವನ ಅಚಲ ನಿರ್ಧಾರವನ್ನು, ಅನುಪಮ ದೇಶಪ್ರೇಮವನ್ನು ಕಂಡು ಅವನ ಬಗೆಗೆ ನನಗಿದ್ದ ಆದರವಿನ್ನೂ ಹೆಚ್ಚಿದೆ. ಇಂಥ ಅಸಾಧಾರಣ ವ್ಯಕ್ತಿಯೊಬ್ಬನ ವಿಶ್ವಾಸದ ಸ್ನೇಹಿತನಾಗುವ ಭಾಗ್ಯ ಲಭಿಸಿದುದಕ್ಕಾಗಿ ಅಭಿಮಾನವೆನ್ನಿಸುತ್ತಿದೆ.

ತಾನು ಮಾಡಿದ ನಿರ್ಧಾರದಲ್ಲಿ ಹೆಚ್ಚಿನದೇನೂ ಇಲ್ಲವೆಂದು ಆತ ವಾದಿಸುತ್ತಾನೆ. ಪಂಡಿತ ನೆಹರೂ ವೃತ್ತಾಂತವನ್ನೆತ್ತಿಕೊಂಡು ತನ್ನ ವಾದವನ್ನು ಸಮರ್ಥಿಸುತ್ತಾನೆ.

"ಏನು ಕಡಿಮೆ ಆಗಿತ್ತು ಜವಾಹರಲಾಲರಿಗೆ? ಲಕ್ಷಾಧೀಶ್ವರ ಏಕಮಾತ್ರ ಪ್ರೀತಿಯ ಪುತ್ರ. ಆನಂದಭವನದ ಅಷ್ಟೈಶ್ವರ್ಯದ ಅಧಿಕಾರಿ. ಸುಂದರಿಯೂ ಸುಗುಣೆಯೂ ಆದ ಪ್ರೀತಿಯ ಪತ್ನಿ ಕಮಲಾ. ಎಲ್ಲವನ್ನೂ ಮರೆತು ನಾಡಿಗಾಗಿ ಸೆರೆಮನೆವಾಸಕ್ಕೆ ಸಿದ್ಧರಾಗಲಿಲ್ಲವೇ ನಮ್ಮ ನೆಹರೂ? ಅವರಿಗಿಂತ ಶ್ರೇಷ್ಠವಾದ ಸ್ಥಿತಿಯೇನೂ ಇಲ್ಲವಲ್ಲ ನನಗೆ?"

ಇಲ್ಲ! ನಿಜ!

ತಮ್ಮ ಪ್ರತ್ಯಕ್ಷ ಆಚರಣೆಯಿಂದಲೇ ಎಂಥ ಪಾಠ ಹಾಕಿಕೊಟ್ಟಿದ್ದಾರಲ್ಲ ನೆಹರೂ! ತಮ್ಮ ತ್ಯಾಗದ ನಂದಾದೀಪದಿಂದ ದೇಶದೆಷ್ಟು ತರುಣರಿಗೆ ಬೆಳಕು ಬೀರಿದ್ದಾರಲ್ಲ! ವ್ಯರ್ಥವಾಗಲಿಲ್ಲ ಅವರ ತ್ಯಾಗಮಯ ಜೀವನ. ಶಂಕರನಂಥ ಲಕ್ಷಾವಧಿ ಭಾರತ ಯುವಕರನ್ನದು ವೀರರನ್ನಾಗಿ ಮಾಡುತ್ತಿದೆ. ಸ್ವಾತಂತ್ರ್ಯ ಸಂಗ್ರಾಮಕ್ಕೆ ಪ್ರೇರೇಪಿಸುತ್ತಿದೆ. ತ್ಯಾಗಕ್ಕೆ ಅಣಿಗೊಳಿಸುತ್ತಿದೆ. ಬಲಿದಾನಕ್ಕೆ ಸಿದ್ಧಗೊಳಿಸುತ್ತಿದೆ!

ಬಲಿದಾನ....!

ಹೌದು! ಬಲಿದಾನ....!

ಇದುವರೆಗೆ ಸ್ವಾತಂತ್ರ್ಯ ಸಮರದ ವೇದಿಕೆಯ ಮೇಲೆ ಎಷ್ಟು ಜೀವಗಳು ಬಲಿಯಾಗಿಲ್ಲ! ಎಷ್ಟು ಜನ ರಾಷ್ಟ್ರವೀರರ ನೆತ್ತರದಿಂದ ಈ ಭೂಮಿಗೆ ಬಣ್ಣ ಬಳಿದಿಲ್ಲ! ತಾತ್ಯಾಟೋಪಿ, ನಾನಾಸಾಹೇಬ್, ಟಿಪ್ಪುಸುಲ್ತಾನ್, ಲಕ್ಷ್ಮೀಬಾಯಿ, ಬಹದೂರ್‌ಷಹಾ, ಖುದೀರಾಮ್, ಭಗತ್‌ಸಿಂಗ್, ಸುಖದೇವ್, ಲಜಪತರಾಯ್, ಧನಶೆಟ್ಟಿ ಮಲ್ಲಪ್ಪ, ಕುರ್ಬಾನ್ ಹುಸೇನ್ ಒಬ್ಬರೇ ಇಬ್ಬರೇ? ಸಹಸ್ರಾರು ಜನ!

ಇವರೆಲ್ಲರ ಬಲಿದಾನ ವ್ಯರ್ಥವಾಗಲಿಲ್ಲ!

ಇವರೆಲ್ಲರ ರಕ್ತ ವ್ಯರ್ಥವಾಗಲಿಲ್ಲ!

ಇವರೆಲ್ಲರ ಆತ್ಮಾಹುತಿ ವ್ಯರ್ಥವಾಗಲಿಲ್ಲ!

ಪ್ರಾಣ ಕೊಟ್ಟು, ಸ್ಫೂರ್ತಿ ಹುಟ್ಟಿಸಿದರು ಅವರು! ರುಂಡ ಕೊಟ್ಟು ಗಂಡಸುತನವನ್ನು ಕೆರಳಿಸಿದರವರು! ಷಂಢರಂತೆ ಬ್ರಿಟಿಷರ ಗುಲಾಮರಾಗಿದ್ದ ಭಾರತೀಯರಲ್ಲಿ ಸ್ವಾತಂತ್ರ್ಯದ ಬೆಂಕಿಯನ್ನು ಹುಟ್ಟಿಸಿ ಹೋರಾಟಕ್ಕೆ ಅಣಿಗೊಳಿಸಿದರವರು! ಅವರ ಬಲಿದಾನದ ಸ್ಫೂರ್ತಿಯಿಂದ, ಅವರ ಅಮರ ತ್ಯಾಗದ ತೇಜಸ್ಸಿನಿಂದ ಇಷ್ಟು ಎಚ್ಚೆತ್ತಿದೆ ಭಾರತ!

ಬಲಿದಾನ! ಬಲಿದಾನ! ಇನ್ನೂ ಬಲಿದಾನ!........

ಸಾಕಷ್ಟು ಬಲಿದಾನವಾಗಬೇಕು.' ರಕ್ತ ಹೊಳೆ ಹೊಳೆಯಾಗಿ ಹರಿಯಬೇಕು.

ಹಾಗೆಯೇ ಒಲಿಯುವಳೇ ಸ್ವಾತಂತ್ರ್ಯ ಲಕ್ಷ್ಮಿ?

ಅವಳನ್ನೊಲಿಸಿಕೊಳ್ಳಬೇಕು ನಾವು.

ಹಾಗೆಯೇ ಒಲಿಯುವುದಿಲ್ಲ ಆಕೆ. ಅವಳಿಗೆ ರಕ್ತ ಕೊಡಬೇಕು. ಪ್ರಾಣ ಕೊಡಬೇಕು. ಅವಳನ್ನು ಪಡೆಯಲು ನಾವು ಸಮರ್ಥರೆಂಬುದನ್ನು ಪ್ರತ್ಯಕ್ಷ ಆಚರಣೆಯಿಂದ ತೋರಿಸಿಕೊಡಬೇಕು.

ಅದಕ್ಕಾಗಿ ಬಲಿದಾನ ಮಾಡಬೇಕು !

ತರುಣರ ಬಲಿ ! ತರುಣಿಯರ ಬಲಿ ! ಮಕ್ಕಳ ಬಲಿ ! ಮುದುಕರ ಬಲಿ !

ಭಾರತದಲ್ಲೆಲ್ಲಾ ನಡೆದಿರುವ ಈ ಸ್ವಾತಂತ್ರ್ಯ ಹೋಮದಲ್ಲಿ ನಮ್ಮಿಬ್ಬರ ಬಲಿಯೂ ನಡೆಯುವುದೇ?

ಯಾರಿಗೆ ಗೊತ್ತು ?

ನಾವೂ ಸಹ ಪ್ರಾಣ ತ್ಯಜಿಸಬೇಕಾಗಿ ಬಂದೀತು.

ಭಯವಿಲ್ಲ ನಮಗೆ !

ನಾವು ಸಿದ್ಧರಾಗಿದೇವೆ!

'ಮಾಡಿರಿ ! ಇಲ್ಲವೇ ಮಡಿಯಿರಿ ! ' ಎಂದು ಆಜ್ಞೆ ಮಾಡಿದಾನೆ ನಮ್ಮ ಸೇನಾಪತಿ.

ನಾವು ಮಾಡುವೆವು ! ಇಲ್ಲ-ಮಡಿಯುವೆವು.

ಇದು ನಮ್ಮ ಸಿರ್ಧಾರ.

ನಮ್ಮಿರ್ವರ ಸಿರ್ಧಾರ.

## ೧೯೪೨ ಆಗಸ್ಟ್ ಹನ್ನೆರಡು

ನಿನ್ನೆ ರಾತ್ರಿಯೆಲ್ಲ ನಿದ್ರೆಯಿಲ್ಲ ಇಬ್ಬರಿಗೂ.

ಹುಚ್ಚು ಹಿಡಿದವರ ಹಾಗೆ, ಆವೇಶ ಬಂದವರ ಹಾಗೆ ರಾತ್ರಿ ಮೂರು ಘಂಟೆಯುವರೆಗೂ ಕೆಲಸ ಮಾಡಿದೆವು.

'ರಣಭೇರಿ!'

ಅದು ನಮ್ಮ ಸ್ವಾತಂತ್ರ್ಯ ಸಮರದ ಕಹಳೆ !

ನಿನ್ನೆ ಮಧ್ಯ ರಾತ್ರಿಯಲ್ಲಿ ಅದರ ಮೊದಲ ಸಂಚಿಕೆ ಹೊರಡಿಸಿದೆವು !

ನಮ್ಮಿಬ್ಬರಲ್ಲಿ ಒಬ್ಬರೂ ಲೇಖಕರಲ್ಲ. ಇದುವರೆಗೆ ಒಂದು ಲೇಖನ

ವನ್ನೂ ನಾವು ಬರೆದವರಲ್ಲ! ಪತ್ರಿಕೆಯೊಂದನ್ನು ಹೊರಡಿಸುವುದಂತೂ ದೂರವೇ ಉಳಿಯಿತು. ಆದರೂ ಎಷ್ಟು ಆತ್ಮವಿಶ್ವಾಸದಿಂದ, ಎಂಥ ಉತ್ಸಾಹದಿಂದ 'ರಣಭೇರಿ' ಯನ್ನು ಬರೆದೆವಲ್ಲ!

'ರಣಭೇರಿ!'

'ಸ್ವಾತಂತ್ರ್ಯ ಸಂಗ್ರಾಮದ ವೀರವಾಣಿ'

''ಸಂಪಾದಕಿ: ಸ್ವಾತಂತ್ರ್ಯದೇವಿ''

ಇಂಥ ವಿಚಾರಗಳು, ಇಂಥ ಉಪಾಯಗಳು ಹೇಗೆ ಹೊಳೆದವೋ ನಮ್ಮ ಬುದ್ಧಿಗೆ?

ಎಕ್ಸರ್‌ಸೈಜ್ ಪುಸ್ತಕಗಳನ್ನೆಲ್ಲಾ ಹರಿದು ಕಾಗದವನ್ನಣಿಗೊಳಿಸಿಕೊಂಡೆವು.

ಕೈ ಬರಹದ ಪತ್ರಿಕೆ ನಮ್ಮದು ;

ಯಾವ ಮುದ್ರಣಾಲಯದವರು ಅಚ್ಚುಹಾಕಿಸಿಕೊಟ್ಟಾರು ಇಂಥ ಪತ್ರಿಕೆಯನ್ನು ?

ಅಂಥ ಧೈರ್ಯ ಯಾರಿಗಿದೆ ?

ಅಂತೂ ಇಂತೂ ಕೈಲಿಂದ ಬರೆಯದೆ ಬೇರೆ ಉಪಾಯವೇ ಇಲ್ಲ.

ಬರೀ ಎರಡು ಪುಟಗಳ ಪತ್ರಿಕೆ! ಅದೂ ಎಕ್ಸರ್ ಸೈಜ್ ಆಕಾರದ್ದು.

ಮೊದಲನೆಯ ಪುಟವೆಲ್ಲಾ ಗಾಂಧೀಜಿಯ ಹೇಳಿಕೆಗಳಿಗೆ. ಎರಡನೆಯ ಪುಟ ಹೋರಾಟದ ಕಾರ್ಯಕ್ರಮದ ವಿವರಣೆಗಳಿಗೆ.

ಮುಂಬಯಿಯಿಂದ ಬಂದ ಒಂದು ಸರ್‌ಕ್ಯುಲರ್ ನಮ್ಮ ಕೈಗೆ ಸಿಕ್ಕಿದೆ. ಕಾಂಗ್ರೆಸ್ ಸಮಾಜವಾದಿ ಪಂಗಡದವರು ಅದನ್ನು ಹೊರಡಿಸುತ್ತಿರುವರಂತೆ. ಅದರಲ್ಲಿ ಉಲ್ಲೇಖಿಸಲ್ಪಟ್ಟ ಕಾರ್ಯಕ್ರಮದ ವಿವರವನ್ನೆಲ್ಲಾ ಕನ್ನಡಕ್ಕಿಳಿಸಿ 'ರಣಭೇರಿ'ಯಲ್ಲಿ ಕೊಟ್ಟಿದ್ದೇವೆ.

ರಾತ್ರಿ ಎರಡು ಗಂಟೆಯ ವರೆಗೆ ಇಬ್ಬರೂ ಕುಳಿತಿದ್ದು ಎರಡು ನೂರು ಪ್ರತಿಗಳಷ್ಟು ಬರೆದು ಮುಗಿಸಿದೆವು. ನಿದ್ರೆ ಇಲ್ಲದೆ ಬಳಲಿದ್ದರೂ ಸಹ ಎಂಥ ಆನಂದವಾಗುತ್ತಿತ್ತು ನಮಗೆ! ಹೋರಾಟದಲ್ಲಿ ನಮ್ಮ ಪಾಲಿನ ಮೊದಲ ಕೆಲಸವನ್ನು ನಾವು ಮಾಡುತ್ತಿದ್ದೆವು. ಬರೆದು ಬರೆದು ಕೈ ಸೋತಿದ್ದರೂ

ನಮ್ಮ ಹೃದಯ ಮಾತ್ರ ಸೋತಿರಲಿಲ್ಲ. ಉತ್ಸಾಹದಿಂದ ಅದು ಪುಟಿಯು ತ್ತಿತ್ತು!

ಇಂದಿನ ಬೆಳಗೆಲ್ಲವೂ ಆ ಪ್ರತಿಗಳನ್ನು ಹಂಚುವುದರಲ್ಲೇ ಕಳೆ ಯಿತು.

ಪೋಲೀಸಿನವರು, ಸಿ. ಐ. ಡಿ. ಗಳು, ನಮ್ಮವರೇ ಆದರೂ ನಮ್ಮ ವಿರುದ್ಧವಾಗಿಯೆ ವರದಿ ಮಾಡುವ ದೇಶದ್ರೋಹಿಗಳ ಕಣ್ಣು ತಪ್ಪಿಸಿ ಪ್ರತಿ ಗಳನ್ನು ಹಂಚುವುದೂ ಕಷ್ಟದ ಕೆಲಸವೇ. ಈಗಂತೂ ಊರಿನಲ್ಲೆಲ್ಲ ಸಿ. ಐ. ಡಿ. ಗಳೇ ತುಂಬಿದ ಹಾಗಿದೆ. ಹೋಟೆಲುಗಳಲ್ಲಿ, ಬೀದಿಗಳಲ್ಲಿ, ಚೌಕಗಳಲ್ಲಿ, ಬಯಲುಗಳಲ್ಲಿ, ಶಾಲೆ ಕಾಲೇಜುಗಳ ಆವರಣಗಳಲ್ಲಿ, ಸಿನೆ ಮಾ ಥಿಯೇಟರುಗಳಲ್ಲಿ ಎಲ್ಲೆಲ್ಲೂ ಗೂಢಚಾರರು ಹರಡಿಕೊಂಡ ಹಾಗಿದೆ. ಸರ್ಕಾರದಿಂದ ದೊರೆಯುವ ನಾಲ್ಕು ಕಾಸುಗಳ ಆಸೆಗಾಗಿ ಸ್ವಾತಂತ್ರ್ಯದ ವೀರಸೈನಿಕರನ್ನು ಹಿಡಿದುಕೊಡಲು ಸಿದ್ಧರಾಗಿರುವ ಈ ದ್ರೋಹಿಗಳ ಬಳ ಗ! ಈ ಸಾವಿರಾರು ಜನರ ಕಾಗೆಯ ಕಣ್ಣು ತಪ್ಪಿಸಿ ಪ್ರತಿಗಳನ್ನೆಲ್ಲ ಹೇಗೋ ಹಂಚಿದೆವು. ವಿದ್ಯಾರ್ಥಿ, ವಿದ್ಯಾರ್ಥಿನಿಯರಿಗಂತೂ ಸರಿಯೆ, ಅಂಗಡಿಕಾರರು, ವ್ಯಾಪಾರಸ್ಥರು, ಕೂಲಿಕಾರರು, ಇತರ ಕೆಲಸಗಾರರು— ಎಲ್ಲರಿಗೂ ಪ್ರತಿಗಳನ್ನು ಕೊಟ್ಟೆವು. ಸುದೈವದಿಂದ ಎಲ್ಲೂ ಸಿಕ್ಕಿ ಬೀಳ ಲಿಲ್ಲ.

ಸಿಕ್ಕಿ ಬೀಳಬಾರದೆಂದೇ ನಮ್ಮ ನಿರ್ಧಾರ.

ಈಗಲೇ ಪೋಲೀಸಿನವರ ಕೈಗೆ ಸಿಕ್ಕಿಬಿದ್ದರೆ ಏನು ಪ್ರಯೋಜನ?

—ಲಾಕಪ್, ಕೋರ್ಟು, ಶಿಕ್ಷೆ, ಸೆರೆಮನೆ-ಅನಂತರ ಅಲ್ಲಿ ಕೊಳೆ ಯುತ್ತ ಬಿದ್ದಿರುವುದು-ಇಷ್ಟೇ ಅಲ್ಲವೆ?

ಹಿಂದಿನ ಹೋರಾಟಗಳಂತಲ್ಲ ಇಂದಿನ ಹೋರಾಟ.

ಬರೀ ಸೆರೆಮನೆ ತುಂಬುವ ಕಾರ್ಯಕ್ರಮ ಮಾತ್ರ ಇಂದು ಇಲ್ಲ: ಇದು ಆಗಸ್ಟ್ ಚಳವಳಿ! ಇದರ ರೀತಿಯೇ ಬೇರೆ!

ಬ್ರಿಟಿಷ್ ಸಾಮ್ರಾಜ್ಯಶಾಹಿಯ ಸೆರೆಮನೆಗಳಲ್ಲಿ ಸೇರಿ ಕೊಳೆಯುವು ದಕ್ಕಾಗಿ ಪ್ರಾರಂಭವಾಗಿಲ್ಲ ಈ ಹೋರಾಟ! ಬ್ರಿಟಿಷರನ್ನೆ ಸೆರೆಮನೆಗಳಲ್ಲಿ

ಹಾಕಿ ಅವರನ್ನು ಸೋಲಿಸಿ ಅನಂತರ ಇಲ್ಲಿಂದ ತೊಲಗಿಸಿಬಿಡುವುದಕ್ಕಾಗಿ ನಡೆದಿರುವ ಹೋರಾಟ ಇದು !

ನಾವು ಪೋಲೀಸರ ಕೈಗೆ ಸಿಕ್ಕಿಬೀಳಕೂಡದು. ಸಾಧ್ಯವಿದ್ದಮಟ್ಟಿಗೂ ಗುಪ್ತವಾಗಿಯೆ ಕೆಲಸ ಮಾಡುತ್ತ ಹೋರಾಟವನ್ನು ಬಲಗೊಳಿಸಬೇಕು.

ಹಿಂದುಸ್ಥಾನ ಸ್ವತಂತ್ರವಾಗುವವರೆಗೂ ಕ್ರಾಂತಿಯ ಕಿಡಿ ಆರದಂತಿರಬೇಕು.

ನಗರದ ಜನಗಳಲ್ಲಿ ಈ ಕಿಡಿಯನ್ನು ಹೊತ್ತಿಸಲಿಕ್ಕಾಗಿ ಏನು ಬೇಕೋ ಅದನ್ನೆಲ್ಲ ಮಾಡುತ್ತಿದೇವೆ. ವಿದ್ಯಾರ್ಥಿ ವಿದ್ಯಾರ್ಥಿನಿಯರೆಲ್ಲ ಪ್ರಚಂಡರೀತಿಯಲ್ಲಿ ಹೋರಾಟ ನಡೆಸಿದ್ದಾರೆ. ಸಭೆ, ಮೆರವಣಿಗೆಗಳ ಮೇಲೆಲ್ಲ ಪ್ರತಿಬಂಧಕವಿದೆ. ಆದರೂ ಎಲ್ಲವೂ ನಡೆದಿದೆ. :ನಿನ್ನೆ ಹಲವರ ಬಂಧನವಾಯಿತು. ಇಂದೂ ಅನೇಕರು ಬಂಧಿಸಲ್ಪಟ್ಟಿದ್ದಾರೆ. ಇಂದಿನ ಸಭೆಯಲ್ಲಿ ಭಾಷಣ ಮಾಡಿದರೂ ಸಹ ಶಂಕರೂ ಪೋಲೀಸರ ಕೈಗೆ ಸಿಕ್ಕಲಿಲ್ಲ. ಹೇಗೋ ಪಾರಾಗಿ ಬಂದ.

ಸಿ. ಐ. ಡಿ. ಗಳಿಗೆ ನಮ್ಮ ಕೊಟಡಿಯ ಪತ್ತೆ ತಿಳಿದಿದೆಯೊ ಏನೊ.

ಒಂದು ವೇಳೆ ತಿಳಿದಿದ್ದರೆ?

'ತಿಳಿದಿದ್ದರೆ ತಿಳಿಯಲಿ. ಅವರು ಬಂದಾಗ ನೋಡಿಕೊಳ್ಳೋಣವಂತೆ' ಎನ್ನುತ್ತಾನೆ ಶಂಕರೂ-ಗಾಂಭೀರ್ಯದಿಂದ.

ನಾವು ಎಚ್ಚರಿಕೆಯಿಂದಿರಬೇಕು. ಒಂದು ಹೆಜ್ಜೆ ಎತ್ತಿಡಬೇಕಾದರೂ ಯೋಚನೆ ಮಾಡಿ ಇಡಬೇಕು. ದುಡುಕುವುದರಿಂದ ಉಪಯೋಗವಿಲ್ಲ.

### ೧೯೪೨ ಆಗಸ್ಟ್ ಹದಿಮೂರು

ನಿನ್ನೆ ರಾತ್ರಿಯಲ್ಲೆಲ್ಲ 'ರಣಭೇರಿ'ಯ ಎರಡನೆಯ ಸಂಚಿಕೆ ಬರೆದು ಮುಗಿಸಿ ಬೆಳಗಿನ ಜಾವದಲ್ಲಿ ಹಾಸುಗೆ ಹಿಡಿದಿದ್ದೆವು.

ಇನ್ನೂ ಸೂರ್ಯೋದಯವಾಗಿರಲಿಲ್ಲ. ಆಗಲೇ ಬಾಗಿಲಿನ ಮೇಲೆ ಸದ್ದಾದ ಹಾಗಾಯಿತು.

ದಿಗಿಲುಗೊಂಡು ಇಬ್ಬರೂ ಎದ್ದು ಕುಳಿತೆವು. ಇಂಥ ಚುಮುಚುಮು ಬೆಳಗಿನಲ್ಲಿ ಬಾಗಿಲು ತಟ್ಟುವವರಾರು? ವಿದ್ಯಾರ್ಥಿನಿಲಯವೆಲ್ಲ ನಸುಕಿನ ಸವಿನಿದ್ರೆಯಲ್ಲಿ ತಲ್ಲೀನವಾಗಿದೆ. ಈಗ ಇಲ್ಲಿಗೆ ಬಂದವರು ಯಾರಾಗಿರ ಬಹುದು ?-

ಪೋಲೀಸರು ?

ಅವರ ಜ್ಞಾಪಕ ಬರುತ್ತಲೂ ನಮ್ಮ ಉತ್ಸಾಹವೆಲ್ಲ ಇಳಿದುಹೋದಂ ತಾಯಿತು. ಕೊಟಡಿಯ ಮೂಲೆಯಲ್ಲಿ ಸಿದ್ಧವಾಗಿದ್ದ 'ರಣಭೇರಿ'ಯ ಪ್ರತಿಗಳ ಕಡೆ ದೃಷ್ಟಿ ಹೊರಳುತ್ತಲೂ ನಮ್ಮ ಆಸೆಯೆಲ್ಲ ಕರಗಿ ಹೋದಂ ತಾಯಿತು. ಇನ್ನೇನು-ಆಧಾರಸಹಿತವಾಗಿ ನಾವಿಬ್ಬರೂ ಪೋಲೀಸರ ಕೈಗೆ ಸಿಕ್ಕಿಬೀಳುತ್ತೇವೆ, ಸೆರೆಮನೆಗೆ ಹೊರಡುತ್ತೇವೆ-ಇಷ್ಟುಬೇಗನೆ ನಮ್ಮ ಹೋರಾಟದ ಕೊನೆಗಾಲ ಬರಬೇಕೇ-ಎಂದು ಚಿಂತಿಸುತ್ತ ಎದ್ದುಹೋಗಿ ಬಾಗಿಲು ತೆರೆದೆವು.

ಬಂದವರಾರೆಂಬುದು ಗೊತ್ತಾಗುತ್ತಲೂ ನಮ್ಮ ಅಸಂತೋಷ ಮಾಯವಾಯಿತಾದರೂ ಸಮಾಧಾನವೇನೂ ಉಂಟಾಗಲಿಲ್ಲ.

ಬಂದಿದ್ದವರು ಶಂಕರನ ತಂದೆ!

ಚಳವಳಿಯ ಸುದ್ದಿ ಕೇಳಿ, ಲಾಠೀಪ್ರಹಾರ, ಗೋಳೀಬಾರುಗಳ ವೃತ್ತಾಂತ ಓದಿ, ಮಗನನ್ನು ನಗರದಲ್ಲಿ ಬಿಟ್ಟಿರಲಾರದೆ ಊರಿಗೆ ಕರೆದು ಕೊಂಡು ಹೋಗುವುದಕ್ಕಾಗಿ ಧಾವಿಸಿ ಬಂದಿದ್ದರವರು.

ನಮ್ಮನ್ನು ಬಂಧಿಸಿಕೊಂಡು ಹೋಗುವುದಕ್ಕಾಗಿ ಪೋಲೀಸಿನವರೇ ಬಂದಿದ್ದರೂ ಸಹ ಅಷ್ಟು ಅಸಮಾಧಾನವಾಗುತ್ತಿರಲಿಲ್ಲವೇನೊ ಶಂಕರನಿಗೆ! ಪೋಲೀಸಿನವರನ್ನೆದುರಿಸುವುದಕ್ಕಿಂತ ತಂದೆಯನ್ನೆದುರಿಸುವುದೇ ಆತನಿಗೆ ಹೆಚ್ಚು ಕಷ್ಟದ ಕೆಲಸವಾಗಿದ್ದಂತೆ ತೋರಿತು. ಊರಿಗೆ ಕರೆದೊಯ್ಯಲು ಬಂದ ತಂದೆಯಿಂದ ತಪ್ಪಿಸಿಕೊಂಡು ಇಲ್ಲಿಯೆ ಇರುವುದೇನೂ ಸುಲಭವಲ್ಲ. ವಾತ್ಸಲ್ಯ, ಪ್ರೀತಿಗಳ ಸೂಕ್ಷ್ಮ ಬಂಧನವನ್ನು ಹರಿದು ಬಿಸುಟುವುದು ಮಹಾ ಕಷ್ಟದ ಕೆಲಸ. ಈ ವಿಲಕ್ಷಣ ಬಂಧನದಿಂದ ಶಂಕರ ಹೇಗೆ ಪಾರಾಗುವನೊ ಎಂದು ನಾನು ಚಿಂತಿಸತೊಡಗಿದೆ.

ಶಂಕರ ಮಾತ್ರ ಅಚಲವಾಗಿಯೇ ಇದ್ದ. ತಂದೆಯು ಯಾವ

ಮಾತೂ ಅವನ ನಿರ್ಧಾರವನ್ನು ಕದಲಿಸಲು ಸಮರ್ಥವಾಗಲಿಲ್ಲ. ಅವರು ಬೇಡಿಕೊಂಡರು, ಬಿನ್ನವಿಸಿಕೊಂಡರು, ಮುದ್ದಿಸಿ ಹೇಳಿದರು, ಬೆದರಿಸಿ ಹೇಳಿದರು. ಎಲ್ಲ ಬುದ್ಧಿಯನ್ನು ಪಯೋಗಿಸಿದರೂ, ಎಲ್ಲ ವಾತ್ಸಲ್ಯವನ್ನು ತೋರ್ಪಡಿಸಿದರೂ ಶಂಕರ ಊರಿಗೆ ಹೊರಡಲು ಒಪ್ಪಲಿಲ್ಲ.

'ನಮಗಿಂದು ನೀನೊಬ್ಬನೇ ಆಧಾರ ಶಂಕರೂ. ನಮ್ಮ ಸರ್ವಸ್ವ ನೀನು. ನಿನ್ನ ವಯಸ್ಸಾದರೂ ಹೆಚ್ಚೇ ಅಂದರೆ ಅದೂ .ಇಲ್ಲ. ಇನ್ನೂ ಹದಿನೆಂಟು ಅಷ್ಟೆ. ಈ ಚಳವಳಿ ಗಿಳವಳಿ ಎಲ್ಲಾ ನಿನಗ್ಯಾಕೆ? ಈ ಹುಚ್ಚು ಬಿಟ್ಟುಬಿಡು- ಮನೆಗೆ ಬಾ. ನಿನ್ನ ತಾಯಿ ದಾರಿ ಕಾಯುತ್ತಿದಾಳೆ' ಎಂದು ಗೋಗರೆದರು ಅವನ ತಂದೆ.

'ಅಲ್ಲಿ ನನ್ನೊಬ್ಬನ ತಾಯಿ ಕಾಯುತ್ತಿರಬಹುದು,ನನ್ನ ದಾರಿಯನ್ನ. ಇಲ್ಲಿ ನಮ್ಮೆಲ್ಲರ ತಾಯಿ ನನ್ನ ದಾರಿ ಕಾಯುತ್ತಿದಾಳೆ ಅಪ್ಪಾ! ನನ್ನ ನಿಶ್ಚಯವನ್ನು ಮುರಿಯಲಾರೆ. ಮನೆಗೆ ಹಿಂದಿರುಗಲಾರೆ!' ಎಂದು ಕಠೋರ ಸ್ವರವಲ್ಲಿ ಉತ್ತರವಿತ್ತ ಶಂಕರೂ.

'ಚಳುವಳಿಗೆ ಸೇರಿ ಮಾಡುವುದಾದರೂ ಏನು ನೀನು' ಎಂದು ಅವರು ದಿಗಿಲುಗೊಂಡು ಕೇಳಿದರು.

'ಏನು ಮಾಡುವೆನೆಂಬುದು ನನಗೇ ಗೊತ್ತಿಲ್ಲ. ಅಂತೂ ಮಾಡುವುದು ಮಾತ್ರ ನಿಜ. ಅಪ್ಪಾ, ಸುಮ್ಮನೆ ಏಕೆ ನರಳುತ್ತೀ? ನನಗೇನೂ ಆಗೋಲ್ಲಪ್ಪಾ. ನಿನ್ನ ಮತ್ತು ಅಮ್ಮನ ಆಶೀರ್ವಾದ ಇದ್ದರೆ ನನಗಾವ ಭಯವೂ ಇಲ್ಲ. ಯುದ್ಧಕ್ಕೆ ಹೊರಟ ಮಗನಿಗೆ ಹರಸಿ ಕಳಿಸುವದನ್ನ ಬಟ್ಟು 'ಹೋಗಬೇಡ' ಎಂದು ಅತ್ತುಕೊಂಡು ಅಪಶಕುನ ಮಾಡಿ ಕಳಿಸಿದರೆ ಹೇಗೆ? ನೀನು ಏನು ಹೇಳಿದರೂ ನಾನು ಮನೆಗೆ ಬರೋದಿಲ್ಲಪ್ಪಾ.'

'ನಮ್ಮ ಮನಸ್ಸು ನೋಯಿಸಿ, ನಮ್ಮನ್ನು ದುಃಖಕ್ಕೀಡುಮಾಡಿ ನೀನು ಚಳವಳಿ ಮಾಡುತ್ತೀಯಾ ಶಂಕರಾ? ಬೇಡ ಕಣೋ ನಿನಗೆ ಒಳ್ಳೆಯದಾಗುವುದಿಲ್ಲ' ಎಂದು ಅವರು ಹೆದರಿಸಿ ನೋಡಿದರು.

ಶಂಕರ ಅಳುಕಲಿಲ್ಲ. 'ನನಗೆ ಒಳ್ಳೆಯದಾಗಬೇಕೆಂದು ನಾನು ಚಳವಳಿಯಲ್ಲಿ ಸೇರುತ್ತಿಲ್ಲ ಅಪ್ಪಾ. ನಮ್ಮ ದೇಶಕ್ಕೆ ಒಳ್ಳೆಯದಾಗಲಿ ಅಂತ ಸೇರುತ್ತಿದೇನೆ. 'ಮಾಡಿರಿ-ಇಲ್ಲ-ಮಡಿಯಿರಿ' ಅಂತ ಹೇಳಿಹೋಗಿದಾನೆ

ನಮ್ಮ ಬಾಪೂ. ಬೇರಾವ ವಿಚಾರವೂ ನಮಗಿಂದುಬೇಕಿಲ್ಲ . ಸೈನಿಕರ ಹಾಗೆ ನಾವಿಂದು ಹೋರಾಟಕ್ಕೆ ಧುಮುಕಬೇಕಾಗಿದೆ ಅಪ್ಪಾ. ಹೋರಾಡುತ್ತ ನಾವು ಸತ್ತರೂ ಚಿಂತೆಯಿಲ್ಲ. ನಮಗದರ ಪರಿವೆಯಿಲ್ಲ. ನಮ್ಮ ದೇಶ ಸ್ವತಂತ್ರವಾದರೆ ಸಾಕು. ಆ ವಿಚಾರದಿಂದಲೇ ನಾವು ತೃಪ್ತಿಪಟ್ಟುಕೊಳ್ಳುತ್ತೇವೆ. '

ಹಳ್ಳಿಯಲ್ಲಿ ಹುಟ್ಟಿ, ಹಳ್ಳಿಯಲ್ಲಿ ಬೆಳದ ಅವನ ತಂದೆಗೆ ಈ ಮಾತುಗಳ ಅರ್ಥವಾಗುವುದು ಸಾಧ್ಯವಿರಲಿಲ್ಲ.

'ಚಳವಳಿ ಮಾಡಬಾರದೆಂದು ನಾನು ಹೇಳೋಲ್ಲವಪ್ಪ. ಆದರೆ ನಿನ್ನಂಥ ಎಳೇ ಹುಡುಗನಿಗ್ಯಾಕೆ ಇದೆಲ್ಲ? ಅದಲ್ಲದೆ ನೀನೊಬ್ಬನೇ ಒಬ್ಬ ನಮಗೆ' ಈ ಮಾತುಗಳಲ್ಲಿ ಆ ತಂದೆಯ ವಾತ್ಸಲ್ಯಮಯ ಹೃದಯವೆಲ್ಲ ಒಡೆದು ಕಾಣುತ್ತಿತ್ತು.

ಸಾಯಂಕಾಲದ ವರೆಗೂ ಅವರ ವಾದ ನಡೆದೇ ಇತ್ತು. ವಿದ್ಯಾರ್ಥಿ ನಿಲಯದ ವ್ಯವಸ್ಥಾಪಕರು, ಶಿಕ್ಷಕರು, ಹಿರಿಯರು, ಮಿತ್ರರು-ಎಷ್ಟೋ ಜನರನ್ನು ಕರೆದುಕೊಂಡು ಬಂದು ಅವರು ಶಂಕರನಿಗೆ ಹಿತೋಪದೇಶ ಮಾಡಿಸಿದರೂ ಎಲ್ಲವೂ ವ್ಯರ್ಥವಾಯಿತು. ಕೊನೆಗೂ ಶಂಕರ ಊರಿಗೆ ಹೊರಡಲು ಒಪ್ಪಲಿಲ್ಲ.

ನಿರಾಸೆಯ ಕೊಟ್ಟ ಕೊನೆಯ ಮೆಟ್ಟಿಲನ್ನುರುಳಿ ಬಿದ್ದ ಅವನ ತಂದೆಯ ವಾತ್ಸಲ್ಯ ಒಮ್ಮೆಲೆ ಭೀಕರ ಕೋಪಕ್ಕೆ ತಿರುಗಿತು. 'ಬರುತ್ತೀಯೋ ಇಲ್ಲವೋ ಹಟಮಾರಿ! ಇಲ್ಲವಾದರೆ ಹೊತ್ತುಕೊಂಡು ಹೋಗ್ತೇನೆ' ಎಂದು ಗದರಿಸಿ ಅವರು ಅವನನ್ನು ಹೊಡೆಯಲು ಕೈಯೆತ್ತಿದರು.

ಕೈ ಎತ್ತಿದ್ದೆಷ್ಟೋ ಅಷ್ಟೆ. ಅವನ ಕೆನ್ನೆಯನ್ನು ತಟ್ಟಲು ಅದು ಸಮರ್ಥವಾಗಲಿಲ್ಲ. ಸಾವಿರಾರು ಸಲ ಅಕ್ಕರೆಯಿಂದ ಸವರಿದ ಆ ಕೋಮಲ ಕೆನ್ನೆಯನ್ನು ಹಿಂದೆಂದೂ ಹೊಡೆದವರಲ್ಲ ಅವರು. ಇಂದಾದರೂ ಹೇಗೆ ಹೊಡೆದಾರು! ಕೋಪವೆಲ್ಲಾ ಹಠಾತ್ತಾಗಿ ಇಳಿದುಹೋಯಿತು. ತಮ್ಮ ಬಗ್ಗೆ ತಮಗೇ ತಿರಸ್ಕಾರ ಬಂದಿತು. ಮಗನ ಬಗೆಗಿದ್ದ ಅತೀವ ಪ್ರೀತಿ, ವಾತ್ಸಲ್ಯ, ಕರುಣೆಗಳೆಲ್ಲ ಹೊರಹೊಮ್ಮಿ ಅವರ ಕಣ್ಣುಗಳಲ್ಲಿ ನೀರೂರಿತು.

'ಬರುವದಿಲ್ಲವೇನೋ ಶಂಕರಾ!' ಎಂದು ಅವರು ಮಗುವಿನಂತೆ ಅತ್ತುಕೊಂಡರು.

ಆ ಹೃದಯುದ್ರಾವಕ ದೃಶ್ಯವನ್ನು ಕಂಡು, ಅವರ ಕಂಠದಲ್ಲಿ ತಲೆದೋರುತ್ತಿದ್ದ ವಿಲಕ್ಷಣ ಕಂಪನವನ್ನು ಗುರುತಿಸಿ ನನ್ನ ಮನಸ್ಸೂ ಅತ್ತುಕೊಳ್ಳತೊಡಗಿತ್ತು. ಇಂಥ ಪ್ರೀತಿಯ ಜೀವಗಳಿಗೆ ಅಸಮಾಧಾನವನ್ನುಂಟುಮಾಡಿ ಶಂಕರ ಚಳವಳಿಗೆ ಸೇರುವುದು ಸರಿಯಾದುದೇ ಎಂಬ ಸಂದೇಹವೂ ನನ್ನೆದೆಯಲ್ಲಿ ಮೂಡತೊಡಗಿತ್ತು. ನನ್ನ ಹೃದಯವೇ ಚಂಚಲವಾಗಿದ್ದಾಗ ಇನ್ನು ಶಂಕರನಿಗೆ ಹೇಗಾಗಿದ್ದೀತೋ ಎಂದುಕೊಂಡು ಆತನಕಡೆ ದೃಷ್ಟಿ ತೂರಿದೆ.

ಏನು ಆಶ್ಚರ್ಯ! ಆತನ ನಿಲುವಿಕೆಯಲ್ಲಾಗಲಿ ಮುಖಭಾವದಲ್ಲಾಗಲೀ ಯಾವ ಮಾರ್ಪಾಡೂ ಕಂಡುಬರಲಿಲ್ಲ. ತಂದೆ ಬಂದಾಗ ಬೆಳಗಿನಜಾವದಲ್ಲಿ ಆತ ವ್ಯಕ್ತಗೊಳಿಸುತ್ತಿದ್ದ ದೃಢ ನಿರ್ಧಾರವೇ ಅವರು ಹೊರಟುನಿಂತಾಗ ಸಾಯಂಕಾಲವೂ ಅವನಲ್ಲಿ ಕಂಡುಬರುತ್ತಿತ್ತು. ಗೋಳಿಟ್ಟು ಅಳುತ್ತಿರುವ ತಂದೆಯನ್ನಾತ ದೃಷ್ಟಿಸುತ್ತಿದ್ದರೂ ದೃಷ್ಟಿಸದಹಾಗೆ ನಿರ್ವಿಕಾರವಾಗಿದ್ದ. ಆ ಗೋಳಿನ ಕರೆ, ಆ ಕಣ್ಣೀರಮಳೆ, ಆ ಗದಗದ ನಡುಗುವ ದನಿ-ಯಾವುದೂ ಅವನ ವಜ್ರ ನಿಶ್ಚಯವನ್ನು ಭೇದಿಸಲು ಸಮರ್ಥವಾಗಿರಲಿಲ್ಲ.

'ಬರ್ತೀಯೋ ಇಲ್ಲವೋ ನನ್ನಪ್ಪಾ!' ಎಂದು ಹಲುಬಿದರು ತಂದೆ-ಎದ್ದು ಹೊರಡುತ್ತಾ.

'ಇಲ್ಲಪ್ಪಾ, ಬರಲು ನನಗೆ ಇಷ್ಟವಿಲ್ಲ. ಸುಮ್ಮನೆ ಯಾಕೆ ಗೋಳಾಡುತ್ತೀ? ನೀನೇನು ಮಾಡಿದರೂ ನಾನು ಬರೋದಿಲ್ಲ. ದಯಮಾಡಿ ಊರಿಗೆ ಹೋಗು. ನನಗೇನೂ ಆಗೋದಿಲ್ಲ. ಚೆನ್ನಾಗೇ ಇರ್ತೀನೆ' ಎಂದು ನಿಷ್ಠುರವಾಗಿ ನುಡಿದು ಶಂಕರೂ ತನ್ನ ಹಾಸುಗೆಯ ಮೇಲೊರಗಿಕೊಂಡುಬಿಟ್ಟ.

ವಿದ್ಯಾರ್ಥಿನಿಲಯದ ವ್ಯವಸ್ಥಾಪಕರು ಅವನ ತಂದೆಯನ್ನು ಸಾಂತ್ವನಗೊಳಿಸಿ ಸ್ಟೇಶನ್ನಿಗೆ ಕರೆದೊಯ್ದು ರೈಲಿಗೆ ಕೂಡಿಸಿಬಂದರು.

ಅವರು ಹೊರಟು ಹೋದ ಸುದ್ದಿ ತಿಳಿದಾಗ ಶಂಕರೂ ಒಂದು ನಿಟ್ಟು ಸಿರು ಹಾಕಿದ. ಅಷ್ಟೆ. ಮಾತನಾಡಲಿಲ್ಲ.

ಅವನ ಹೃದಯದಲ್ಲಿ ಎಂಥ ಭಾವನೆಗಳ ತುಮುಲ ಹೊಯ್ದಾಟ ನಡೆದಿದೆಯೊ! ಮುಖದಲ್ಲಿ ಮಾತ್ರ ಯಾವ ಭಾವವನ್ನೂ ವ್ಯಕ್ತಗೊಳಿಸದೆ ಆತ ಮೌನವಾಗಿ ಮಲಗಿಕೊಂಡಿದ್ದಾನೆ!

**೧೯೪೨ ಆಗಸ್ಟ್ ಇಪ್ಪತ್ತು**

ನಾಲ್ಕಾರು ದಿನಗಳ ಕಾಲ ಹೋರಾಟದ ಗಡಿಬಿಡಿಯಲ್ಲಿ ಕಳೆದು ಹೋಯಿತು.

ಒಂದು ಕ್ಷಣವೂ ಬಿಡುವಿಲ್ಲ ನಮ್ಮಿಬ್ಬರಿಗೂ.

ಶಾಲೆ, ಕಾಲೇಜುಗಳ ಮುಷ್ಕರ ಯಶಸ್ವಿಯಾಗಿ ಸಾಗುತ್ತಿದೆ. ವಿದ್ಯಾರ್ಥಿ ವಿದ್ಯಾರ್ಥಿನಿಯರೆಲ್ಲ ಉತ್ಸಾಹದಿಂದ ಹರತಾಳದಲ್ಲಿ ಭಾಗವಹಿಸುತ್ತಿದ್ದಾರೆ. ಮೊನ್ನೆ ಹೊರಟ ಪ್ರಚಂಡ ಮೆರವಣಿಗೆಯ ಮೇಲೆ ಪೋಲೀಸರು ಲಾಠೀ ಚಾರ್ಜ್ ಮಾಡಿದರು. ಯಾರೂ ಹಿಂದೆಗೆಯಲಿಲ್ಲ.

ನಮ್ಮ 'ರಣಭೇರಿ' ದಿನದಿನಕ್ಕೂ ಸಿಡಿಲು ಮರಿಯಾಗಿ ಪರಿಣಮಿಸುತ್ತಿದೆ. ರಾತ್ರಿಯೆಲ್ಲ ಅದನ್ನು ಬರೆಯುವ ಕೆಲಸ. ಹಗಲೆಲ್ಲ ಅದರ ಪ್ರಚಾರದ ಕೆಲಸ. ವಿದ್ಯಾರ್ಥಿ, ವಿದ್ಯಾರ್ಥಿನಿಯರನ್ನು ಸಂಘಟಿಸುವ ಕಠಿನ ಕಾರ್ಯವೂ ಶಂಕರನ ಮೇಲೆ ಬಿದ್ದಿದೆ.

ತಾರುಣ್ಯದ ಪ್ರಚಂಡ ಉತ್ಸಾಹ ಹುಚ್ಚು ಹುಚ್ಚಾಗಿ ಹಿಂಸೆಗೆ ತಿರುಗದಂತೆ, ಅಹಿಂಸೆಯ ದಾರಿಯಲ್ಲೇ ಹರಿದು ಉಪಯೋಗಕಾರಿಯಾಗುವಂತೆ ನಾವೆಲ್ಲರೂ ಪ್ರಯತ್ನಿಸಬೇಕಾಗಿದೆ.

ಅದಕ್ಕಾಗಿ ಶಂಕರೂ ಹಗಲಿರುಳೂ ದುಡಿಯುತ್ತಿದ್ದಾನೆ. ವಿದ್ಯಾರ್ಥಿ ವೃಂದಕ್ಕೆಲ್ಲಾ ಆತನಿಂದು ನಾಯಕ.

**೧೯೪೨ ಆಗಸ್ಟ್ ಇಪ್ಪತ್ತೈದು**

ಕೊನೆಗೂ ನಮ್ಮನ್ನು ಬಂಧಿಸಿಬಿಟ್ಟರು.

ಈಗ ಈ ಸೆರೆಮನೆಗೆ ಬಂದುಬಿದ್ದಿದ್ದೇವೆ.-ನಾನು ಶಂಕರ ಇಬ್ಬರೂ.

ತೀರ ಸಣ್ಣದಾದ ಈ ಸೆರೆಮನೆಯಲ್ಲಿ ಆಗಲೇ ನಾಕ್ನೈದು ನೂರು ಜನ ತರುಣರನ್ನು ತುಂಬಿಬಿಟ್ಟಿದ್ದಾರೆ. ಎಲ್ಲರೂ ಸಾಮಾನ್ಯವಾಗಿ ವಿದ್ಯಾರ್ಥಿಗಳೇ. ಇನ್ನೂ ಇಪ್ಪತ್ತು ವರ್ಷದ ಒಳಗಿನವರೇ.

ಕೊನೆಗೂ ಸಾಮ್ರಾಜ್ಯಶಾಹಿ ಮೋಸದಿಂದ ನಮ್ಮನ್ನು ಹಿಡಿದು ಹಾಕಿವೆ. ಅವರ ಚಕ್ರವ್ಯೂಹದಲ್ಲಿ ಬಂದು ಬಿದ್ದ ನೂರಾರು ಅಭಿಮನ್ಯುಗಳು ಉದ್ವೇಗದಿಂದ ಕುದಿಯುತ್ತಿದ್ದಾರೆ.

ಸೆರೆಮನೆಯಲ್ಲಿದ್ದರೂ ಸ್ವತಂತ್ರರಂತೆಯೇ ವರ್ತಿಸುತ್ತಿದ್ದೇವೆ ನಾವು. ಪ್ರತಿನಿತ್ಯವೂ ಬೆಳಿಗ್ಗೆ ಪ್ರಾರ್ಥನೆ ಮಾಡುತ್ತೇವೆ. 'ವಂದೇಮಾತರಂ' ಹಾಡುತ್ತೇವೆ. ಸಭೆ ನಡಸುತ್ತೇವೆ. ಮೆರವಣಿಗೆಗಳನ್ನೂ ಹೊರಡಿಸುತ್ತೇವೆ. ಸೆರೆಮನೆಯ ಹೊರಗಡೆ ಗುಡುಗುತ್ತಿರುವ 'ಕ್ವಿಟ್ ಇಂಡಿಯಾ' ಎಂಬ ಘೋಷಣೆಯೊಂದಿಗೆ ನಮ್ಮ ಘೋಷಣೆಗಳನ್ನೂ ಸೇರಿಸುತ್ತೇವೆ. ಭಾಷಣಗಳಾಗುತ್ತಿವೆ. ಚರ್ಚೆಗಳು ನಡೆಯುತ್ತಿವೆ. ರಾಜಕೀಯದ ವಿಚಾರವಾಗಿ ಅಭ್ಯಾಸ ಕೂಟಗಳೂ ಜರುಗುತ್ತಿವೆ. ಬೆಳಿಗ್ಗೆ ಮತ್ತು ಸಾಯಂಕಾಲ ಎರಡು ಹೊತ್ತೂ ಕವಾಯಿತು ನಡೆಯುತ್ತಿದೆ. ಸ್ವಯಂಸೇವಕರಮೊಂದು ಪಡೆಗೆ ಕ್ರಮವಾದ ಶಿಕ್ಷಣ ದೊರೆಯುತ್ತಿದೆ.

ಸರ್ಕಾರದ ಸೆರೆಮನೆಯನ್ನೇ ನಾವು ಸ್ವಾತಂತ್ರ್ಯ ಸೈನಿಕರನ್ನು ಸಿದ್ಧಗೊಳಿಸುವ ಶಿಬಿರವನ್ನಾಗಿ ಮಾರ್ಪಡಿಸಿಕೊಂಡಿದ್ದೇವೆ.

ಈ ಎಲ್ಲ ಚಟುವಟಿಕೆಗಳಲ್ಲೂ ಶಂಕರ ಉತ್ಸಾಹದಿಂದ ಭಾಗವಹಿಸುತ್ತಿದಾನೆ. ಸ್ವಯಂಸೇವಕ ದಳಕ್ಕಂತೂ ಆತ ಪ್ರಾಣಸ್ವರೂಪಿ. ಮುಂದಾಳು. ಪ್ರೀತಿಯ ನಾಯಕ. ಅವನ ದೃಢಕಾಯ ದೇಹ, ಹೊಸ ಹರಯದ ಉತ್ಸಾಹ, ಆ ಉತ್ಸಾಹಕ್ಕೆ ತಕ್ಕ ಚಪಲತನ, ಎಲ್ಲಕ್ಕೂ ಮೆರುಗು ಕೊಡುವ ಸುಂದರ ಗಂಭೀರ ಮುಖ, ನಯವಾದ ಹಿತವಾದ ಮಾತುಗಾರಿಕೆ ವಿದ್ಯಾರ್ಥಿಗಳ ಮನಸ್ಸನ್ನು ಗೆದ್ದುಕೊಂಡಿದೆ.

ಸೆರೆಮನೆಗೆ ಬಂದ ಮೂರು ದಿನಗಳಲ್ಲೇ ಆತ ನೂರಾರು ಜನ ತರುಣರನ್ನೆಲ್ಲ ಒಲಿಸಿಕೊಂಡಿದ್ದಾನೆ.

ಎಂಥ ಮಾಟಗಾರಿಕೆಯಿದೆಯೋ ಶಂಕರನಲ್ಲಿ? ನನಗೆ ತಿಳಿಯದು.

ಅಲ್ಲ—ಮಾಟಗಾರಿಕೆ ಅಲ್ಲ ಅದು ! ಅವನ ಸ್ವಭಾವವೇ ಅಂತಹದು.

ನಾಲ್ಕೈದು ದಿನಗಳಿಂದಲೂ ವಿಪರೀತ ನಿಶ್ಶಕ್ತಿ. ಎದ್ದು ನಡೆಯಲು ಸಹ ಸಾಧ್ಯವಿಲ್ಲವಾಗಿದೆ.

ವಾರದಲ್ಲಿ ಎರಡು ಬಾರಿ ವಾಂತಿ, ಭೇದಿ ತಲೆದೋರುತ್ತಿದ್ದರೆ ನಿಶ್ಶಕ್ತಿಯಾಗದಿದ್ದೀತೇ ?

ಮೊವಲೇ ಸೆರೆಮನೆಯ ಊಟ. ಇದಕ್ಕೆ 'ಊಟ' ಎನ್ನುವುದೂ ಸಾಹಸದ ಮಾತೇ ! ದನ ಕೂಡ ತಿನ್ನಲಾರದಂಥ ಅನ್ನವನ್ನು ಇಂದು ಜನ ತಿನ್ನಬೇಕಾಗಿದೆ. ರಾಗಿ ಮುದ್ದೆಯಾದರೂ ಪರವಾಯಿಲ್ಲ. ಶುಚಿಯಾಗಿ, ರುಚಿಯಾಗಿ ಇದ್ದರೆ ಅದೇ ಸಾಕು ನಮಗೆ. ಆದರೆ ಈ ಅಡಿಗೆಯ ಹೊಲಸು ! ಈ ದುರ್ವಾಸನೆ !

ತಿನ್ನುವುದಾದರೂ ಹೇಗೆ ಇಂಥ ಅನ್ನವನ್ನು ?

ಆದರೂ ತಿನ್ನಬೇಕಾಗಿ ಬಂದಿದೆ. ಹಸಿವೆ ಕೇಳಬೇಕಲ್ಲ !

ಅಡಿಗೆಯಲ್ಲಿ ಸ್ವಚ್ಛತೆಯನ್ನು ಪಾಲಿಸಬೇಕೆಂದು ಈ ಅಧಿಕಾರಿಗಳಿಗೆಷ್ಟು ಹೇಳಿದರೂ ಪ್ರಯೋಜನವಾಗಲೊಲ್ಲದು. ನಿತ್ಯವೂ ಮತ್ತೆ ಅದೇ ರಗಳೆ. ಅದೇ ಹೊಲಸು ಅನ್ನ-ದುರ್ವಾಸನೆ ಹೊಡೆಯುವ ಸಾರು. ಮೊನ್ನೆ ಫಿನಾಯಿಲ್ ಹಾಕಿದ ಬಕೆಟ್ಟಿನಲ್ಲಿ ಹುಳಿತಂದು ಬಡಿಸಿಬಿಟ್ಟರು ಪುಣ್ಯಾತ್ಮರು. ರಾತ್ರಿಯೆಲ್ಲಾ ವಾಂತಿ—ರಾತ್ರಿಯೆಲ್ಲಾ ಭೇದಿ.

ಜೇಲರಿಗೆ ಈ ವಿಚಾರವನ್ನು ತಿಳಿಸಿದಾಗ ಆತ ಅಸಡ್ಡೆಯಿಂದ ಮೂಗು ಮುರಿದು ಹೊರಟುಹೋಗುತ್ತಾನೆ. ನಾವೆಲ್ಲ ಸತ್ತುಹೋದರೂ ಅವನಿಗೇನಂತೆ ! ಅದು ಅವನಿಗೆ ಸಂಬಂಧವಿಲ್ಲದ ವಿಚಾರ !

ಹೇಳಿ ಹೇಳಿ ಬೇಸರಗೊಂಡು, ಅಧಿಕಾರಿಗಳ ಅಸಡ್ಡೆಗೆ ರೋಸಿಕೊಂಡು ಅವರನ್ನೆಚ್ಚರಿಸಲು ಘೋಷಣೆಗಳಿಗೆ ಮೊದಲು ಮಾಡುತ್ತೇವೆ. ಸೆರೆಮನೆಯೆಲ್ಲಾ ನಮ್ಮ ಗರ್ಜನೆಯಿಂದ ದುಮುದುಮಿಸುತ್ತದೆ.

ಆದರೇನು, ಯಾವುದಕ್ಕೂ ಅಧಿಕಾರಿಗಳು ಸೊಪ್ಪುಹಾಕಲೊಲ್ಲರು.

ಮೊನ್ನೆ ಜೇಲರು ನಮ್ಮ ಬರಾಕಿನೆದುರಿಗೆ ಹಾದು ಹೋಗುತ್ತಿದ್ದಾಗ ಪುಟ್ಟ ಹುಡುಗನೊಬ್ಬ ಅವನನ್ನು ಕಂಡು ಹಾಸ್ಯ ಮಾಡಿದ: 'ಕ್ವಿಟ್ ಜೇಲರ್ ! ' ಎಂದು.

ಇನ್ನು ನಾಲ್ಕಾರು ಹುಡುಗರೂ ಅವನನ್ನನುಕರಿಸಿ 'ಕ್ವಿಟ್ ಜೇಲರ್' ಎಂದು ಕೂಗಿಕೊಂಡರು.

ಚಿಕ್ಕ ಹುಡುಗರು ಅವರು! ಅವರಿಗೇನು ತಿಳಿಯುತ್ತದೆ! ಹೊಲಸು ಹುಳಿ ತಿಂದು ತಿಂದು, ಜೇಲರನ ಅಸಡ್ಡೆಯ ವರ್ತನೆಯನ್ನು ನೋಡಿ ನೋಡಿ ನಮಗೇ ಬೇಸರವಾಗಿರುವಾಗ ಇನ್ನು ಈ ಚಿಕ್ಕ ಹುಡುಗರ ಮನಸು ಹೇಗಾಗಿರಬೇಡ! ಜೇಲರನ ಮೇಲಿನ ಕೋಪ ಅವರನ್ನೀರೀತಿ ಲಘುಹಾಸ್ಯಕ್ಕೆ ಪ್ರೇರೇಪಿಸುತ್ತದೆ.

ಚಿಕ್ಕ ಹುಡುಗರ ಈ ಲಘು ಹಾಸ್ಯಕ್ಕೆ ರೇಗಿ ಬಿದ್ದು ಅದರ ಸೇಡು ತೀರಿಸಿಕೊಳ್ಳಲು ಪ್ರಯತ್ನಿಸುವನಲ್ಲ ಈ ಜೇಲರ್! ವಯಸ್ಕನೂ, ಅನುಭವಿಕನೂ ಆದ ಈ ಮನುಷ್ಯ ಈ ರೀತಿ ಚಿಕ್ಕ ಮಕ್ಕಳೊಂದಿಗೆ ಕದನಕ್ಕೆ ನಿಲ್ಲುವುದೇ?

೧೯೪೨ ಸಪ್ಟಂಬರ್ ಎಂಟು

ಒಂದೊಂದು ದಿನವೂ ಹೊಸ ಹೊಸ ಸಮಾಚಾರಗಳನ್ನು ಹೊತ್ತು ತರುತ್ತಿದೆ.

ಸುಭಾಷ್ ಬಾಬುಗಳು ಮೂರು ಲಕ್ಷ ಜನರ ಸೈನ್ಯದೊಂದಿಗೆ ಹಿಂದೂಸ್ಥಾನವನ್ನು ಪ್ರವೇಶಿಸಲಿರುವರಂತೆ. ಬರ್ಮಾ ಗಡಿಯಲ್ಲಿ ಭೀಕರ ಹೋರಾಟಕ್ಕಾರಂಭವಾಗಿದೆಯಂತೆ. ಇನ್ನೇನು ಕೆಲದಿನಗಳಲ್ಲೇ ಸುಭಾಷರ ಸೈನ್ಯ ಬಂಗಾಲವಲ್ಲಿ ಪ್ರವೇಶಿಸುವುದಂತೆ.

ಮೊದಲಿನಿಂದಲೂ ಸುಭಾಷರ ಪಕ್ಷಪಾತಿಯಾದ ವಿದ್ಯಾರ್ಥಿ ವೃಂದವೆಲ್ಲ ಈ ಸುದ್ದಿಯನ್ನು ಕೇಳಿ ಸಂತೋಷದಿಂದ ನರ್ತಿಸುತ್ತಿದೆ. ಬ್ರಿಟಿಷರನ್ನು ಹೊಡೆದೋಡಿಸಲು ಮುನ್ನುಗ್ಗಿ ಬರುತ್ತಿರುವ ಬೋಸ್ ಸೇನೆಯನ್ನು ಸೇರಿಕೊಂಡು ಹೋರಾಡಲು ಆಗಲೇ ನಮ್ಮಲ್ಲಿ ಅನೇಕ ತರುಣರು ಅಣಿಯಾಗುತ್ತಿದ್ದಾರೆ. ಅದಕ್ಕಾಗಿ ಸಿದ್ಧತೆಯನ್ನೂ ನಡಸಿದ್ದಾರೆ-

ನಮ್ಮ ಸಿದ್ಧತೆ, ನಮ್ಮ ಒಕ್ಕಟ್ಟು, ನಮ್ಮ ಉತ್ಸಾಹಗಳನ್ನು ನಿರೀಕ್ಷಿಸಿ ಸರ್ಕಾರ ರೋಸಿಹೋದಂತೆ ತೋರುತ್ತದೆ. ನಮ್ಮ ಸ್ಫೂರ್ತಿಯನ್ನು

ಕುಗ್ಗಿಸಿ ಆಗಸ್ಟ್ ಚಳವಳಿಯಿಂದ ನಮ್ಮನ್ನು ಪರಾವೃತ್ತರನ್ನಾಗಿ ಮಾಡಲು ಅಧಿಕಾರಿಗಳು ಅನೇಕ ರೀತಿಯಲ್ಲಿ ಪ್ರಯತ್ನಿಸುತ್ತಿದ್ದಾರೆ. ಮೊನ್ನೆ ಜಿಲ್ಲಾಧಿಕಾರಿಗಳು ನಮ್ಮ ಸೆರೆಮನೆಗೆ ಬಂದಿದ್ದರು, ನಮ್ಮಲ್ಲಿ ಹಲವರನ್ನು ಕಂಡು ಮಾತನಾಡಿದರು. ಸವಿಸವಿ ಮಾತಿನಜಾಲ ಬೀಸಿ ನಮ್ಮನ್ನು ಮರುಳು ಮಾಡಲು ಪ್ರಯತ್ನಿಸಿದರು. 'ದೇಶದ ಸತ್ಪ್ರಜೆಗಳಾಗಲಿರುವವರು ನೀವು. ಭಾವೀ ನಾಗರಿಕರು ನೀವು. ವಿದ್ಯಾಭ್ಯಾಸ ಮಾತ್ರ ನಿಮ್ಮ ಕರ್ತವ್ಯ. ಈ ರಾಜಕೀಯ ಚಳುವಳಿಯ ಗಲಾಟೆಗೆ ಬಿದ್ದು ಬಾಳನ್ನು ಹಾಳುಮಾಡಿಕೊಳ್ಳಬೇಡಿ' ಎಂದು ಉಪದೇಶ ಮಾಡಲು ಬಂದರು.

ಜಿಲ್ಲಾಧಿಕಾರಿಗಳ ಈ ಉಪದೇಶ ನಮ್ಮಲ್ಲಿ ಯಾರಿಗೂ ಅಗತ್ಯವಿರಲಿಲ್ಲ.

'ನಮ್ಮ ಕರ್ತವ್ಯವೇನೆಂಬುದನ್ನು ನಾವು ಬಲ್ಲೆವು. ಸರ್ಕಾರೀ ಅಧಿಕಾರಿಗಳು ಅದನ್ನು ನಮಗೆ ತಿಳಿಸಬೇಕಾದ ಅಗತ್ಯವಿಲ್ಲ. ಈ ಗುಲಾಮಗಿರಿಯ ವಿದ್ಯಾಭ್ಯಾಸ ನಮಗಾರಿಗೂ ಇಷ್ಟವಿಲ್ಲ. ಇಂದು ನಮ್ಮ ದೇಶದೆಲ್ಲ ಜನರ ಗುರಿಯೂ ಸ್ವಾತಂತ್ರ್ಯ. ನಮ್ಮ ಗುರಿಯೂ ಅದೇ!' ಎಂದು ಹೇಳಿದ ಶಂಕರೂ.

ಜಿಲ್ಲಾಧಿಕಾರಿಗಳು ಕೈ ಹೊಸಕಿಕೊಳ್ಳುತ್ತಾ ಹೊರಟುಹೋದರು.

**೧೯೪೨ ಅಕ್ಟೋಬರ್ ಹದಿನೈದು**

ವಿದ್ಯಾರ್ಥಿನಿಲಯದ ಕೊಟಡಿಯಲ್ಲಿದ್ದ ಹಾಗೇ ಸೆರೆಮನೆಯ ನಮ್ಮ 'ಕ್ರಾಂತಿ ಭವನ' ದಲ್ಲೂ ನಾನೂ, ಶಂಕರೂ ಇಬ್ಬರೂ ಒಂದೇ ಕಡೆ ಧ್ವಜ ಊರಿದ್ದೇವೆ.

ಇಂದು ಅವನ ತಂದೆಯವರಿಂದ ಪತ್ರವೊಂದು ಬಂದಿತ್ತು. ಪಾಪ! ತುಂಬಾ ವ್ಯಥೆಪಟ್ಟುಕೊಂಡು ಬರೆದಿದ್ದಾರೆ. 'ನಿನ್ನ ತಾಯಿಯ ದುಃಖವನ್ನಂತೂ ಬರೆಯಲು ಸಾಧ್ಯವಿಲ್ಲ. ನಿನ್ನ ಧ್ಯಾನದಲ್ಲೇ ಆಕೆ ಹಾಸಿಗೆ ಹಿಡಿದಿದ್ದಾರೆ.' ಎಂದು ಬರೆದುದನ್ನೋದಿದಾಗ ಶಂಕರೂ ಚಿತ್ತ ಚಲವಿಚಲವಾಗುವುದು ಅಸ್ಪಷ್ಟವಾಗಿ ಕಂಡು ಬಂದಿತು. ಮೌನವಾಗಿ ಪತ್ರವನ್ನೋದಿ ಮುಗಿಸಿ 'ನೀನೂ ನೋಡು' ಎಂದು ನನ್ನ ಕೈಗೆ ಕೊಟ್ಟ. ನಾನು ಓದಿ ಮುಗಿಸುತ್ತಲೂ,

'ನಮ್ಮಮ್ಮ ಹಾಸಿಗೆ ಹಿಡೀಬಹುದು ಅಂತ ನಾ ತಿಳಿದಿರಲಿಲ್ಲಪ್ಪ. ನಾನು ಸೆರೆಮನೆಯಲ್ಲಿದ್ದರೂ ಸಹ ಸುಖವಾಗಿರಬಲ್ಲೆ, ಆರೋಗ್ಯವಾಗಿರಬಲ್ಲೆ ಅನ್ನೋದು ಅವರಿಗೆ ಅರ್ಥವಾಗೋಲ್ಲವಲ್ಲಾ ?' ಎಂದ.

'ತಾಯಿ ಕರುಳು ಶಂಕರೂ ಅದು. ಮಗ ಎದುರಿಗಿದ್ದಾಗಲೇ, ಪೂರ್ಣ ಆರೋಗ್ಯಶಾಲಿಯಾಗಿದ್ದಾಗಲೇ ಇಲ್ಲದ ಕೊರತೆಗಳನ್ನೆಲ್ಲ ಕಂಡುಹಿಡಿದು ಗೋಳಾಡುವ ಕಣ್ಣು ತಾಯಿ ಕಣ್ಣು. ಇನ್ನು ನರಕಕ್ಕಿಂತ ಭೀಕರವಾದದ್ದೆಂದು ಖ್ಯಾತವಾಗಿರುವ ಜೇಲಿಗೆ ಬಂದು ಬಿದ್ದಲ್ಲಿ ತಾಯಿ ಕರುಳು ಏನೇನನ್ನು ಕಲ್ಪಿಸಿಕೊಳ್ಳಲಿಕ್ಕಿಲ್ಲ! ' ಎಂದೆ.

'ಇಲ್ಲಿಗೆ ಬಂದ ಬಳಿಕ ಎರಡು ಮೂರು ಪತ್ರ ಬರೆದಿದ್ದೇನೆ. 'ನನ್ನ ಬಗ್ಗೆ ಕೊಂಚವೂ ಚಿಂತೆಮಾಡಬೇಡಿ. ನಾನು ಚೆನ್ನಾಗೇ ಇರುತ್ತೇನೆ' ಎಂದು ಮತ್ತೆ ಮತ್ತೆ ತಿಳಿಸಿದ್ದೇನೆ. ಅದರೂ ನಮ್ಮಮ್ಮ ನನ್ನ ಯೋಚನೆಯಿಂದಾಗಿ ನರಳುತ್ತಾ ಹಾಸಿಗೆ ಹಿಡಿದಿದ್ದಾಳಂತೆ. ಆಕೆಯನ್ನು ಅಲ್ಲಿಹಾಗೆ ನರಳಲು ಬಿಟ್ಟು ನಾನಿಲ್ಲಿ ಸೆರೆಮನೆಯಲ್ಲಿ ಕೊಳೆಯುತ್ತ ಬಿದ್ದಿರುವುದರಿಂದ ಪ್ರಯೋಜನವಾದರೂ ಏನು ಅಂತ ಒಂದೊಂದು ಸಲ ಅನ್ನಿಸುತ್ತೆ.

'ಅದು ಸರಿಯಪ್ಪ. ಆದರೆ ಮಾಡುವುದಾದರೂ ಏನು ಈಗ? ಇಲ್ಲಿ ಬಿದ್ದುಕೊಂಡಿರೋದರಿಂದ ಏನೂ ಪ್ರಯೋಜನವಿಲ್ಲ. ಸೆರೆಮನೆಗಳ ಸಿಡಿದು ಹೊರಬಿದ್ದು ಭೀಕರ ಹೋರಾಟ ನಡೆಸಬೇಕಾದ ಸಂದರ್ಭವೂ ಒಂದು ಬಂದೀತು ಅಂತ ನನಗಾಸೆಯಿದೆ. ಅದಕ್ಕಾಗಿ ನಾವು ಸಿದ್ಧತೆ ನಡೆಸಬೇಕು ಅಷ್ಟೆ. !'

'ಎಷ್ಟು ಅಂತ ಸಿದ್ಧತೆ ನಡಸೋದು ? ನಮ್ಮ ಸಿದ್ಧತೆಯೆಲ್ಲಾ ಮುಗಿದಿದೆ. ಇನ್ನು ರಣರಂಗಕ್ಕೆ ಧುಮುಕುವದೊಂದೇ ಉಳಿದಿದೆ. ಎಂದು ಬರುತ್ತದೆಯೋ ಆ ಗಳಿಗೆ !'ಎಂದ ಶಂಕರೂ ಎಂದೂ ಇಲ್ಲದ ಉದ್ವೇಗದಿಂದ.

ಸೆರೆಮನೆಯಲ್ಲಿದ್ದ ನಾಲ್ಕುನೂರು ಜನ ವಿದ್ಯಾರ್ಥಿಗಳನ್ನೆಲ್ಲಾ ಅಂದು ಅಂಥ ಉದ್ವೇಗವೆ ಆವರಿಸಿಕೊಂಡಿತ್ತು.

**೧೯೪೨ ಅಕ್ಟೋಬರ್ ಇಪ್ಪತ್ತು**

ಇಂದು ಸೆರೆಮನೆಯ ಪರೀಕ್ಷೆ ಮಾಡುವುದಕ್ಕಾಗಿ ಸೆರೆಮನೆಗಳ ಮು

ಖ್ಯಾಧಿಕಾರಿಗಳೂ, ಮುಖ್ಯ ಇಂಜನಿಯರೂ ಬಂದಿದ್ದರು. ಇಂಜನಿಯರ್ ಯೂರೋಪಿಯನ್. ಆಂಗ್ಲಮನುಷ್ಯ. ಆತ ಇಲ್ಲಿಗೆ ಬರುವುದಾಗಲಿ, ಕುರಿಗಳನ್ನು ಪರೀಕ್ಷಿಸಿವಂತೆ ನಮ್ಮನ್ನೆಲ್ಲ ಪರೀಕ್ಷಿಸುವುದಾಗಲಿ ಅರ್ಥಾತ್ ನಮ್ಮಲ್ಲಿ ಯಾರಿಗೂ ಇಷ್ಟವಿರಲಿಲ್ಲ.

ಅಸಮಾಧಾನದಿಂದ ಪರಿತಪಿಸುತ್ತ ನಾವೆಲ್ಲರೂ ಬೆಳಗಿನ ಉಪಹಾರ ಸ್ವೀಕರಿಸುತ್ತಿದ್ದೆವು. ಸುಮಾರು ಎಂಟು ಗಂಟೆಯಾಗಿತ್ತು. ಇನ್ನೇನು ಆ ಅಧಿಕಾರಿಗಳು ಬರುವ ಸಮಯ ಸಮೀಪಿಸಿತ್ತು.

'ಕ್ವಿಟ್ ಜೇಲರ್!' ಎಂಬ ಹಾಸ್ಯದಿಂದಾಗಿ ಹುಡುಗರ ಮೇಲೆ ಕೋಪಿಸಿಕೊಂಡಿದ್ದ ಜೇಲರ್ ಸಾಹೇಬ ಹಠಾತ್ತಾಗಿ ನಾವು ಉಪಹಾರ ಮಾಡುತ್ತಿದ್ದ ಸ್ಥಳಕ್ಕೆ ಬಂದ. ಅವನ ಆಗಮನವನ್ನು ನಿರೀಕ್ಷಿಸಿಯೂ ನಿರೀಕ್ಷಿಸದವರಂತೆ ನಾವೆಲ್ಲ ಮೌನವಾಗಿ ಉಪಹಾರ ಸ್ವೀಕರಿಸುತ್ತಿದ್ದೆವು.

ಮೇಲಾಧಿಕಾರಿಗಳ ಆಗಮನದಿಂದಾಗಿ ಜೇಲರನ ದರ್ಪ ಎಂದಿಗಿಂತಲೂ ಇಂದು ಹೆಚ್ಚಿರಬೇಕು. ಬಂದವನೆ ಕಾಲುಕೆರೆದು ಜಗಳಕ್ಕೆ ನಿಂತ. ಹುಡುಗರನ್ನುದ್ದೇಶಿಸಿ ಹಂಗಿಸುವ ಮಾತನಾಡುತ್ತಾ 'ಎಲ್ಲಿ, ಆಗ ನನಗೆ ಕ್ವಿಟ್ ಜೇಲರ್ ಅಂತಿದ್ದಿರಲ್ಲ! ನೀವು ಧೀರರಾಗಿದ್ದರೆ ನಮ್ಮ ಮುಖ್ಯಾಧಿಕಾರಿಗಳು ಬಂದಾಗ ಅವರ ಮುಂದೆ ಆ ಮಾತು ಹೇಳಿ ನೋಡೋಣ ನಿಮ್ಮ ಗಂಡಸುತನ!' ಎಂದ. ಆ ಮೂರ್ಖ ಮನುಷ್ಯನೊಂದಿಗೆ ವಾದಿಸುವ ಇಚ್ಛೆ ನಮಗಾರಿಗೂ ಇರಲಿಲ್ಲವಾದ್ದರಿಂದ ಎಲ್ಲರೂ ಸುಮ್ಮನಿದ್ದೆವು.

ಅಷ್ಟಕ್ಕೇ ಸುಮ್ಮನೆ ಹೊರಟು ಹೋಗಬಾರದೇ ಆ ಪ್ರಾಣಿ? ಮತ್ತೆ ಮತ್ತೆ ಹುಡುಗರನ್ನು ಹಂಗಿಸುವ ಮಾತುಗಳಿಂದ ರೇಗಿಸತೊಡಗಿದ. ಬಿಸಿ ರಕ್ತದ ತರುಣರು ಎಷ್ಟು ಅಂತ ತಾಳಿಕೊಂಡಾರು! ಅವರ ಸಹನೆಯೂ ತೀರುತ್ತ ಬಂದಿತ್ತು.

ಇಂಥ ಸನ್ನಿವೇಶದಲ್ಲಿ ಸೆರೆಮನೆಯ ಮುಖ್ಯಾಧಿಕಾರಿಗಳು ಆಂಗ್ಲ ಇಂಜನಿಯರೊಂದಿಗೆ ಅಲ್ಲಿಗೆ ಬಂದುಬಿಟ್ಟರು.

ಯಾವ ಘೋಷಣೆಗಾಗಿ ಜೇಲರರು ವಿದ್ಯಾರ್ಥಿಗಳನ್ನು ಹಂಗಿಸುತ್ತಿದ್ದರೊ-ಆ ಒಂದು ಘೋಷಣೆ ಮಾತ್ರವಲ್ಲ-ಇನ್ನೂ ಹಲವಾರು ಘೋಷಣೆಗಳೂ ಕ್ಷಣಮಾತ್ರದಲ್ಲಿಯೇ ಎಲ್ಲೆಲ್ಲೂ ದುಮುದುಮಿಸತೊಡಗಿದವು. 'ಬ್ರಿಟಿ

ಷರೆ, ಭಾರತದಿಂದ ತೊಲಗಿ' ಎಂಬ ಗರ್ಜನೆಯಂತೂ ಗುಡುಗಿನಂತೆ ಮೊರೆಯುತೊಡಗಿತು.

ತಮಗೆ ದೊರೆತ ಈ ಸ್ವಾಗತವನ್ನು ಕಂಡಾಗ ಅರ್ಥಾತ್ ಅಧಿಕಾರಿಗಳಿಗೆ ಕೋಪ ಬಂತು. ನಮ್ಮಲ್ಲಿ ನಾಲ್ವರನ್ನು, ನಿರಪರಾಧಿಗಳನ್ನು ಹಿಡಿದು ಅವರಿಗೆ ಏಕಾಂತವಾಸದ ಶಿಕ್ಷೆ ವಿಧಿಸಬೇಕೆಂದು ಆಜ್ಞಾಪಿಸಲಾಯಿತು.

ಈ ಅನ್ಯಾಯದ ಆಜ್ಞೆಯನ್ನು ಪ್ರತಿಭಟಿಸುವುದಕ್ಕಾಗಿ ಮತ್ತೆ ವಿದ್ಯಾರ್ಥಿಗಳು ಘೋಷಣೆಗಳಿಗಾರಂಭಿಸಿದರು. 'ಕ್ವಿಟ್ ಇಂಡಿಯಾ! ಕ್ವಿಟ್ ಇಂಡಿಯಾ!' ಎಂದು ನಾಲ್ಕುನೂರು ಕಂಠಗಳೂ ಗರ್ಜಿಸತೊಡಗಿದವು. ಸೆರೆಮನೆಯಲ್ಲೆಲ್ಲಾ ಕೋಲಾಹಲವೋ ಕೋಲಾಹಲ. ಆ ಗಲಾಟೆಯಿಂದ ಪಾರಾಗಿ ಹೊರಬೀಳಬೇಕಾದರೆ ಅಧಿಕಾರಿಗಳಿಗೆ ಸಾಕು ಸಾಕೆನ್ನಿಸಿ ಹೋಯಿತು. ಹೊರಟರೂ ಸಹ ತಮ್ಮ ಮರ್ಯಾದೆಗೆ ಭಂಗ ಬರಬಾರದೆಂದು ನಾಲ್ವರು ವಿದ್ಯಾರ್ಥಿಗಳಿಗೆ 'ತಿಕಡಿ'ಯ ಮೇಲೆ ಹನ್ನೆರಡು ಏಟು ಕೊಡಬೇಕೆಂಬ ಕ್ರೂರ ಆಜ್ಞೆ ವಿಧಿಸಿಹೋದರು. ಸೆರೆಮನೆಯ ಸರ್ಕಾರಿ ಗುಲಾಮರು ಆ ಆಜ್ಞೆಯನ್ನು ಜಾರಿಗೆ ತರಲು ಸಿದ್ಧತೆ ಮಾಡತೊಡಗಿದರು.

'ತಿಕಡಿ' ಯನ್ನು ಹೊತ್ತುಕೊಂಡು ಬರಲು ಅತ್ತ ಕೆಲವರು ಹೋಗುತ್ತಲೂ ಇತ್ತ ಹೊಡೆಯುವ ಬಾರಕೋಲು ಸಿದ್ಧವಾಯಿತು. ನೆರೆದಿದ್ದ ನಾಲ್ಕು ನೂರು ಜನ ವಿದ್ಯಾರ್ಥಿಗಳೆಲ್ಲ ಉದ್ವೇಗದಿಂದ ಆ ಭೀಕರ ಸಿದ್ಧತೆಯನ್ನು ನಿರೀಕ್ಷಿಸುತ್ತಿದ್ದರು.

ಎಲ್ಲರ ಹೃದಯದಲ್ಲೂ ಒಂದೇ ವಿಚಾರ-ಒಂದೇಯೋಚನೆ-ಆ ನಾಲ್ವರು ವಿದ್ಯಾರ್ಥಿಗಳು ಮಾಡಿದ ಅಪರಾಧ ಏನು? ನಾಲ್ಕು ನೂರು ಜನ ವಿದ್ಯಾರ್ಥಿಗಳು ಘೋಷಣೆ ಮಾಡಿದಂತೆಯೇ ಈ ನಾಲ್ಕು ಜನರೂ ಮಾಡಿದ್ದಾರೆ. ಇವರಿಗೆ ಮಾತ್ರ ಈ ಶಿಕ್ಷೆಯೇಕೆ? ಇವರೇಕೆ ಈ ಅನ್ಯಾಯದ ಶಿಕ್ಷೆಯನ್ನನುಭವಿಸಬೇಕು? ಅದರಲ್ಲೂ ಈ ಭೀಕರ ಬಾರಕೋಲಿನ ಏಟು! ನಾಲ್ಕು ನೂರು ಜನ ಭಾರತ ತರುಣರ ಕಣ್ಣಮುಂದೆ ಇಂಥ ಅನಾಗರೀಕ ಶಿಕ್ಷೆ ನಡೆಯುಗೊಡಬೇಕೇ?

'ಕೂಡದು! ಕೂಡದು! ಈ ಶಿಕ್ಷೆ ನಡೆಯಕೂಡದು. ತಿಕಡಿ ಏಟ

ನಿಂದ ನಮ್ಮ ಬಂಧುಗಳನ್ನು ಕಾಪಾಡಬೇಕು' ಎಂದು ಎಲ್ಲರ ಅಂತರಾತ್ಮಗಳು ನಿರ್ಧರಿಸಿದುವು. ಅವರನ್ನು ಏಟಿನಿಂದ ತಪ್ಪಿಸುವುದಕ್ಕಾಗಿ ಎಂಥ ಪ್ರಸಂಗಕ್ಕೂ ಸಿದ್ಧರಾಗಬೇಕೆಂದು ನಿಶ್ಚಯವಾಯಿತು.

ಅಷ್ಟರಲ್ಲಿ ಕಾವಲುಗಾರರು ತಿಕಡಿಯನ್ನು ಹೊತ್ತುಕೊಂಡು ಬಂದರು. ನೆಲಕ್ಕಿಳಿಸಿದ್ದೇ ತಡ, ವಿದ್ಯಾರ್ಥಿಗಳು ಅದನ್ನು ವಶಪಡಿಸಿಕೊಂಡರು. ನಾಲ್ಕುನೂರು ಜನ ತರುಣರ ಮುಂದೆ ಹಲವರು ಕಾವಲುಗಾರರ ಆಟ ಏನು ನಡೆದೀತು! ತಿಕಡಿ ನಮ್ಮ ವಶವಾಯಿತು. ಏಟಿನ ಶಿಕ್ಷೆ ನಿಂತುಹೋಯಿತು.

ಇಷ್ಟೆಲ್ಲಾ ಮುಗಿದು ವಾತಾವರಣ ಶಾಂತವಾಗಬೇಕಾದರೆ ಮಧ್ಯಾಹ್ನ ಒಂದು ಗಂಟೆಯಾಗಿತ್ತು.

ಪ್ರಕರಣ ಮಾತ್ರ ಇಷ್ಟಕ್ಕೇ ಮುಗಿಯಲಿಲ್ಲ. ನಮ್ಮಲ್ಲಿ ಆರು ಜನ ವಿದ್ಯಾರ್ಥಿಗಳ ಮೇಲೆ ಗಲಭೆ ಮಾಡಿದರೆಂಬ ಕಾರಣದಿಂದ ಮೊಕದ್ದಮೆ ಹೂಡಲಾಯಿತು.

ಏನು ಮೊಕದ್ದಮೆಯೋ ಏನು ಕತೆಯೊ, ನಮ್ಮಲ್ಲಿ ಯಾರಿಗೂ ಈ ಮೊಕದ್ದಮೆಗಳ ಬಗ್ಗೆ ಕೊಂಚವೂ ಆಶಂಕೆಯಿಲ್ಲ. ಸೋತು ಹಿಮ್ಮೆಟ್ಟುತ್ತಿರುವ ಸರ್ಕಾರ ತನ್ನ ಉಳಿವಿಗಾಗಿ ನಡಸಿರುವ ಕೊಟ್ಟ ಕೊನೆಯ ಪ್ರಯತ್ನಗಳಿವು, ದರ್ಪದ ನಾಟಕಗಳಿವು ಅಷ್ಟೆ. ಇದಕ್ಕೂ ಹೆಚ್ಚಿನ ಬೆಲೆಯನ್ನು ನಾವಾರೂ ಕೊಡುವುದಿಲ್ಲ ಇವಕ್ಕೆ.

ಇಂದು ಸೆರೆಮನೆಯಲ್ಲೆಲ್ಲ ಆನಂದವೋ ಆನಂದ. ಸರ್ಕಾರದ ಅನ್ಯಾಯದ ವಿರುದ್ಧ ಹೋರಾಡಿ ದೊರಕಿಸಿದ ಪ್ರಥಮ ವಿಜಯದಿಂದಾಗಿ ಹುಡುಗರೆಲ್ಲ ಹರ್ಷದಿಂದ ಹಾರಾಡುತ್ತಿದ್ದಾರೆ.

೧೯೪೨ ಅಕ್ಟೋಬರ್ ಇಪ್ಪತ್ತೊಂಬತ್ತು.

ಸೆರೆಮನೆಯಲ್ಲಿ ಬಂದೊದಗಿದ ಸೋಲಿನಿಂದಾಗಿ ಸರ್ಕಾರದ ಪಿತ್ತ ನೆತ್ತಿಗೇರಿರುವಂತೆ ತೋರುತ್ತಿದೆ.

ಅಂದು ಆಂಗ್ಲ ಅಧಿಕಾರಿಗಾದ ಅವಮಾನ, ತಿಕಡಿ ಏಟಿನ ಆಜ್ಞೆ ಗುಂಟಾದ ದುರ್ಗತಿ ಸರ್ಕಾರದ ಅಹಂಭಾವವನ್ನು ಕೆರಳಿಸಿದಂತಿದೆ.

ಒಂದೆರಡು ದಿನಗಳಿಂದ ವಾತಾವರಣ ಇನ್ನೂ ಗಂಭೀರವಾಗಿದೆ. ಮುಖ ಭಂಗಿತವಾದ ಸರ್ಕಾರ ಹುಡುಗರ ಮೇಲೆ ಸೇಡು ತೀರಿಸಿಕೊಳ್ಳಲು ಹೊಂಚುಹಾಕುತ್ತಿದೆಯೆಂಬ ಪಿಸುಮಾತು ಕೇಳಿಸುತ್ತಿವೆ.

ಯಾವ ರೀತಿಯದಾಗಿರುವುದೋ ಈ ಪ್ರತೀಕಾರ ?—

ಯಾರಿಗೂ ತಿಳಿಯದು.

ಇಂದು ಸಾಯಂಕಾಲ ಶಂಕರೂ ಮಾತನಾಡುತ್ತಾ 'ಸರ್ಕಾರ ಕೈಕೊಳ್ಳಲಿರುವ ಪ್ರತೀಕಾರದ ವದಂತಿಗಳಿಂದ ನಮ್ಮಲ್ಲಿ ಯಾರ ಧೃತಿಯೂ ಕೆಡದಿರಲಿ. ಏನು ಬರುವುದೊ-ಎಲ್ಲಾ ಬರಲಿ. ಎಲ್ಲರೂ ಕೂಡಿಕೊಂಡೇ ಅದನ್ನೆದುರಿಸೋಣ. ಅಳುಕುವುದು, ಅಂಜುವುದು ಹೇಡಿಗಳ ರೀತಿ. ನಾವು ಗಾಂಧೀ ಸೈನಿಕರು. ಅಂಜಿಕೆಯೆಂಬುವುದು ಕ್ಷಣನಮ್ಮ ಬಳಿ ಸುಳಿಯ ಕೂಡದು.' ಎಂದು ಹೇಳಿ ಬಸವಣ್ಣನವರ ವಚನವೊಂದನ್ನು ಗಂಭೀರ ದನಿಯಲ್ಲಿ ಹೇಳಿದ.

'ನಾಳೆ ಬಪ್ಪುದು ನಮಗಿಂದೇ ಬರಲಿ !
ಇಂದು ಬಪ್ಪುದು ನಮಗೀಗಲೇ ಬರಲಿ !
ಇದಕಾರಂಜುವರು, ಇದಕಾರಳುಕುವರು !'

ವಚನ ಹೇಳಿ ಮುಗಿಸುವಾಗ ಶಂಕರೂ ಮುಖ ಉಜ್ವಲ ಪ್ರಭೆಯಿಂದ ಬೆಳಗುತ್ತಿತ್ತು. ಅವನ ಕಣ್ಣುಗಳಲ್ಲಿ ಅವರ್ಣನೀಯ ಕಳೆ ಮಿನುಗುತಿತ್ತು. ಅವನ ಸಮಸ್ತ ಶರೀರವೂ ಭಾವನಾವೇಗದಿಂದ ಸೂಕ್ಷ್ಮವಾಗಿ ಕಂಪಿಸುವಂತೆ ತೋರುತ್ತಿತ್ತು.

**೧೯೪೨ ಅಕ್ಟೋಬರ್ ಮೂವತ್ತು.**

ಎರಡು ಮೂರು ದಿನಗಳ ಈ ಭೀಕರ ಘಟನೆಗಳನ್ನು ಸಾಯುವ ವರೆಗೂ ಮರೆಯಲಾರೆ ನಾನು. ನಮ್ಮಲ್ಲಿ ಯಾರೂ ಮರೆಯಲು ಸಾಧ್ಯವಿಲ್ಲ. ಅಂಥ ರುದ್ರ ದಿನಗಳವು. ಅಂಥ ದುರಂತ ಕಾಂಡಗಳವು.

ಮೊನ್ನೆ ಮೊಕದ್ದಮೆಗೊಳಗಾದ ಆರು ಜನ ವಿದ್ಯಾರ್ಥಿಗಳ ವಿಚಾರಣೆಗಾಗಿ ಸೆರೆಮನೆಯ ಹೊರಗಿನ ಆವರಣದಲ್ಲಿ ವಿಶೇಷ ನ್ಯಾಯಾಸ್ಥಾನವೊಂದು ರಚಿತವಾಗಿತ್ತು. ಅಲ್ಲಿಗೆ ಅವರನ್ನು ಕರೆದೊಯ್ದರು ಇಪ್ಪತ್ತೇಳನೇ ತಾರೀಖು. ಅವರ ಪರವಾಗಿ ಸಾಕ್ಷಿಹೇಳುವುವಕ್ಕಾಗಿ ನಮ್ಮಲ್ಲಿ ಹದಿನೆಂಟು ಜನ ವಿದ್ಯಾರ್ಥಿಗಳು ಹೋಗಿದ್ದರು.

ನಮ್ಮ ಶಂಕರನೂ ಅವರಲ್ಲೊಬ್ಬ.

ಈ ನ್ಯಾಯಾಸ್ಥಾನದ ನಾಟಕ ಮುಗಿಯಬೇಕಾದರೆ ಸಾಯಂಕಾಲ ಆರು ಘಂಟೆಯಾಯಿತು. ವಿಚಾರಣೆಗಾಗಿ ಹೋಗಿದ್ದವರೆಲ್ಲ ಹಸಿದು ಬಿಟ್ಟಿದ್ದರು. ಮಧ್ಯಾಹ್ನದಲ್ಲಿ ನ್ಯಾಯಾಸ್ಥಾನಕ್ಕೆ ಹೋದವರಿಗೆ ಉಪಹಾರ ಕೊಡುವ ಪದ್ಧತಿ ಸೆರೆಮನೆಯಲ್ಲಿ ಎಂದಿನಿಂದಲೂ ಇದೆ. ಅಂದು ಮಾತ್ರ ಸೆರೆಮನೆಯ ಅಧಿಕಾರಿಗಳು ಅವರಿಗೆ ಉಪಹಾರ ಕೊಡಲು ನಿರಾಕರಿಸಿದರು. ಈ ಅನ್ಯಾಯವನ್ನು ಕಂಡ ವಿದ್ಯಾರ್ಥಿಗಳು ಅರ್ಥಾತ್ ಕಿಡಿಕಿಡಿಯಾದರು. ಉಪಹಾರ ಕೊಡದಿದ್ದಲ್ಲಿ ಸೆರೆಮನೆಯಲ್ಲಿ ಕಾಲಿಡುವುದಿಲ್ಲವೆಂದು ಹಟ ತೊಟ್ಟರು.

ಇಪ್ಪತ್ನಾಲ್ಕುಜನ ತರುಣ ವಿದ್ಯಾರ್ಥಿಗಳಿಗೂ, ಸೆರೆಮನೆಯ ಅಧಿಕಾರಿಗಳಿಗೂ ಬಿಸಿಬಿಸಿ ವಾದವಿವಾದಗಳಿಗಾರಂಭವಾಯಿತು.

ಸೇಡಿಗಾಗಿ ಹಾತೊರೆಯುತ್ತಿದ್ದ ಸರ್ಕಾರಕ್ಕೆ ಇಂಥದೊಂದು ಕುಂಟು ನೆಪವೇ ಸಾಕಾಗಿತ್ತು. ಸೆರೆಮನೆಯೊಳಕ್ಕೆ ಪ್ರವೇಶಿಸುವುದಿಲ್ಲವಾಗಿ ಹಟ ಹಿಡಿದಿದ್ದ ವಿದ್ಯಾರ್ಥಿಗಳನ್ನು ಬಲವಂತವಾಗಿ ಒಳಸೇರಿಸಲು ಬಂದರು ಪೋಲೀಸರು. ಹತ್ತು ಜನರೆ? ಇಪ್ಪತ್ತು ಜನರೆ ? ಮುನ್ನೂರು ಜನರು! ಎಲ್ಲರ ಕೈಗಳಲ್ಲಿ ಲಾಠಿಗಳು !

ಈ ಶಸ್ತ್ರಸಜ್ಜಿತ ಪೋಲೀಸರೇ ಸಾಕಾಗಲಿಲ್ಲವೇನೋ ! ಅವರಿಗೆ ನೆರವಾಗಿ ವಿದ್ಯಾರ್ಥಿಗಳ ಸೊಕ್ಕು ಮುರಿಯುವುದಕ್ಕಾಗಿ ಸರ್ಕಾರ ನೂರುಜನ ರಿಜರ್ವ್ ಪೋಲೀಸರನ್ನು ಕಳುಹಿಸಿತು. ಕತ್ತಿನ ತುಂಬ ಸುರೆ ಕುಡಿದು ಲಾಠಿ, ಬರ್ಜಿಗಳನ್ನು ಹಿಡಿದು ಮದೋನ್ಮತ್ತರಾದ ಆ ನೂರು ಜನರು ನಿಶ್ಶಸ್ತ್ರರೂ, ಎಳೆವಯಸ್ಸಿನವರೂ ಆದ ವಿದ್ಯಾರ್ಥಿಗಳ ಮೇಲೆ ಬೀಳಲು ಸಿದ್ಧರಾಗಿ ಬಂದರು.

ಸೆರೆಮನೆಯ ಹೊರಗಡೆ ನಡೆದಿದ್ದ ಈ ಪೈಶಾಚಿಕ ಸಿದ್ಧತೆಯ ವಿಚಾರ ಒಳಗಿದ್ದ ನಮಗೆಲ್ಲಾ ತಿಳಿಯಿತು. ಆಗ ಊಟದ ಸೊತ್ತು- ಹಸಿವು ಬೇರೆ ಹೊಡೆಮಕೊಳ್ಳುತ್ತಿತ್ತು. ಇಂಥ ಸಮಯದಲ್ಲಿ ಕಾಳಗದ ಆಹ್ವಾನ ಬೇರೆ! ನಮ್ಮೆಲ್ಲರ ಉದ್ವೇಗ ಉರಿಯತೊಡಗಿತು. ಸೆರೆಮನೆಯ ಒಳ ಬಾಗಿಲಿನ ಬಳಿ ಎಲ್ಲರೂ ಸಾಲಾಗಿ ನಿಂತು ಹೊರಗಡೆ ಇರುವ ನಮ್ಮ ಬಂಧುಗಳ ಬೇಡಿಕೆಯನ್ನು ಪೂರ್ಣಗೊಳಿಸಬೇಕೆಂದು ಕೇಳಲಾರಂಭಿಸಿದೆವು. ನಮ್ಮ ಕೇಳಿಕೆಗಳಿಗೆ ದರ್ಪದ ನುಡಿಗಳೇ ಉತ್ತರವಾಗಿ ದೊರೆತವು. ಸರಿ. ಜಯಘೋಷಗಳಿಗಾರಂಭವಾಯಿತು.

ರಾತ್ರಿ ಹನ್ನೊಂದೂವರೆಯುವರೆಗೂ ಇದೇ ರೀತಿ ಕಳೆದುಹೋಯಿತು. ಅನಂತರ ಹೊರಗಿದ್ದ ವಿದ್ಯಾರ್ಥಿಗಳೆಲ್ಲ ಸೆರೆಮನೆಯೊಳಗೆ ಹೋಗಬೇಕು-ಇಲ್ಲವಾದರೆ ಬಲಾತ್ಕಾರದಿಂದ ಅವರನ್ನೆತ್ತಿ ಒಳಕ್ಕೆ ಬಿಸುಟಲಾಗುವದೆಂದು ಪೋಲೀಸರು ಎಚ್ಚರಿಕೆ ಕೊಟ್ಟರು. ಈ ಎಚ್ಚರಿಕೆಯಿಂದ ಯಾವ ಪರಿಣಾಮವೂ ಆಗಲಿಲ್ಲ. ತಮ್ಮ ಬೇಡಿಕೆಯನ್ನು ಪೂರ್ಣಗೊಳಿಸಿದ ಹೊರತೂ ತಾವು ಒಳಕ್ಕೆ ಪ್ರವೇಶಿಸುವುದು ಸಾಧ್ಯವಿಲ್ಲವಾಗಿ ಸ್ಪಷ್ಟವಾಗಿ ಉತ್ತರ ದೊರೆಯಿತು.

ಸರಿ. ಆರಂಭವಾಯಿತು ಪೋಲೀಸರ ಪೈಶಾಚಿಕ ಹಿಂಸಾಲೀಲೆ.

ಹೊರಗಡೆ ಇದ್ದ ವಿದ್ಯಾರ್ಥಿಗಳನ್ನೆಲ್ಲಾ ಹೊಡೆದು ಒಬ್ಬೊಬ್ಬರನ್ನೇ ಎತ್ತಿ ಬಾಗಿಲಿನ ಪುಟ್ಟ ಕಿಂಡಿಯಿಂದ ತೂರಿ ಒಳಕ್ಕೆ ಬಿಸುಟಿದರು ಪೋಲೀಸು ಅಧಿಕಾರಿಗಳು. ಈ ಘೋರ ದೃಶ್ಯವನ್ನು ನೋಡುತ್ತಾ ನಿಂತಿದ್ದ ನಮ್ಮೆಲ್ಲರ ತಾಳ್ಮೆಯ ಕೊನೆಯ ಅಂಶವೂ ತೀರುತ್ತ ಬಂದಿತ್ತು. ಆದರೂ ಇಂಥ ಸಂದರ್ಭವಲ್ಲೂ ಅಹಿಂಸೆಯಿಂದಲೇ ಆಚರಿಸಬೇಕೆಂದು ಎಲ್ಲವನ್ನೂ ತಡೆದುಕೊಂಡು ಹಸಿವೆಯಿಂದಲೂ, ಪೋಲೀಸರ ಹೊಡೆತಗಳಿಂದಲೂ, ಅದಕ್ಕಿಂತ ಮಿಗಿಲಾದ ಅವಮಾನದಿಂದಲೂ ಜರ್ಜರಿತರಾಗಿದ್ದ ನಮ್ಮ ಬಂಧುಗಳನ್ನು ಸ್ವಾಗತಿಸಿ ಕರೆದುಕೊಂಡೆವು.

ಇನ್ನೇನು ಈ ದಿನದ ರಾದ್ಧಾಂತ ಮುಗಿದುಹೋಯಿತು ಎಂದುಕೊಂಡು ಇನ್ನು ನಮ್ಮ ನಮ್ಮ ಬರಾಕುಗಳಿಗೆ ಹೊರಡುವುದರಲ್ಲಿದ್ದೆವು. ಅಷ್ಟರಲ್ಲೇ ಕುಡಿದು ಉನ್ಮತ್ತರಾಗಿದ್ದ ಪೋಲೀಸಿನವರು ಎಲ್ಲ ಕಡೆಗಳಿಂ

ದಲೂ ನಮ್ಮ ಮೇಲೆ ಬಿದ್ದು ಲಾಠಿ, ಬರ್ಜಿಗಳಿಂದ ಏಟುಹಾಕಲು ಮೊದಲುಮಾಡಿದರು. ಹಠಾತ್ತಾಗಿ ನಡೆದ ಈ ದೈತ್ಯದಾಳಿಯನ್ನೆದುರಿಸುವುದು ತಿಳಿಯದೆ ನಮ್ಮಲ್ಲಿ ಅನೇಕರು ದಾರಿ ಸಿಕ್ಕಿದಹಾಗೆ ನಡೆಯಲಾರಂಭಿಸಿದರು.

ಕೇವಲ ಒಂದು ಫರ್ಲಾಂಗ್ ಚದುರವಷ್ಟಿದ್ದ ಜಾಗದಲ್ಲಿ ನಾಲ್ಕು ನೂರು ಜನ ಸಿಕ್ಕಿಬಿದ್ದಿದ್ದೆವು. ಸುತ್ತ ಮುತ್ತ, ಎಡಕ್ಕೆ ಬಲಕ್ಕೆ-ಎತ್ತ ಹೊರಳಿದರೂ ಪೋಲೀಸರು! ಕಣ್ಣು ಹೊರಳಿಸಿದ ಕಡೆ ಪೋಲೀಸರ ಲಾಠಿ. ವಿದ್ಯುದ್ದೀಪದ ಬೆಳಕಿನಲ್ಲಿ ಮೃತ್ಯುವಿನ ಕೋರೆದಾಡೆಯಂತೆ ಹೊಳೆಯುವ ಬರ್ಜಿ. ಬರ್ಜಿಯ ತಿವಿತವನ್ನು ತಪ್ಪಿಸಿಕೊಳ್ಳಲು ಒಂದು ಕಡೆ ಹೊರಳಿದರೆ ಲಾಠಿಯ ಏಟನಿಂದಾಗಿ ತಲೆ 'ಠಳ್' ಎನ್ನುತ್ತಿತ್ತು. ತಲೆಗೆ ಬೀಳುವ ಏಟನ್ನು ತಪ್ಪಿಸಿಕೊಳ್ಳಲು ಬೆನ್ನು ಬಾಗಿಸಿದರೆ ಬೆನ್ನಿಗೇ ಬೀಳುತ್ತಿತ್ತು ಹೊಡೆತ 'ಡಬ್' ಎಂದು. ಹೊಡೆತವನ್ನು ತಡೆದುಕೊಳ್ಳಲಾರದೆ ನೆಲಕ್ಕುರುಳಿದ ಎಳೆ ಬಾಲಕರು ರಿಜರ್ವ್ ಪೋಲೀಸರ ಭೀಕರ ಬೂಟುಗಳಿಗೆ ಬಲಿಯಾದರು. ತಾವೇನನ್ನು ಮಾಡುತ್ತಿರುವೆವೆಂಬುದರ ಅರಿವೂ ಇಲ್ಲದೆ ಆ ಪೋಲೀಸರು ಚಿಕ್ಕ ಚಿಕ್ಕ ಬಾಲಕರನ್ನೂ ಬೂಟಿನಕೆಳಗೆ ಹಾಕಿ ಹುಳುಗಳನ್ನು ತುಳಿವಂತೆ ತುಳಿದರು. ಅವರ ಎದೆಗಳ ಮೇಲೆ ಒದ್ದು ಒದ್ದು ಹೊಸಗಿದರು. ಬೂಟುಗಾಲುಗಳನ್ನು ಅನೇಕರ ತುಟಿಗಳ ಮೇಲಿಟ್ಟು ಹಲ್ಲು ಮುರಿದು ರಕ್ತತೆಗೆದರು. ಹದಿಮೂರು ವರ್ಷ ವಯಸ್ಸಿನ ಎಳೆಬಾಲಕರನ್ನೂ ಬಿಡಲಿಲ್ಲ ಅವರು. ಪಶುಗಳನ್ನು ಹೊಡೆಯುವಂತೆ ಆ ಎಳೆ ಜೀವಗಳನ್ನು ಹೊಡೆದರು. ರಕ್ತ ಮಿಶ್ರಿತವಾದ ಮುಖಗಳಿಂದ ಆ ಮಕ್ಕಳು 'ಅಯ್ಯೋ ಅಮ್ಮಾ' ಎಂದು ಕೂಗಿಕೊಳ್ಳುತ್ತಿದ್ದರೂ ಲೆಕ್ಕಿಸದೆ 'ಅಮ್ಮನ್ನ ಕರೀತೀರಾ ಸೂಳೇಮಕ್ಕಳಿರಾ! ನಿಮ್ಮ ಸೊಕ್ಕು ಇಳಿಸುತ್ತೇವೆ' ಎಂದು ಆಕ್ರೋಶ ಮಾಡುತ್ತಾ ಆ ಬಾಲಕರ ಬಾಯಿಗೆ ಉಗಿದು ಸುಮ್ಮನಾಗಿಸಿದರು.

ನನಗೂ ಬಿದ್ದಿತ್ತು ಏಟು! ಎರಡು ಕೈಗಳಿಂದಲೂ ಗಾಯವನ್ನೊತ್ತಿ ಹಿಡಿದು ಹೇಗೋ ನಿಂತುಕೊಂಡಿದ್ದೆ.

ಶಂಕರನಿಗೆ?

ಅವನ ಸ್ಥಿತಿ ಘೋರವಾಗಿತ್ತು.

ಕಿಂಡಿಯಿಂದ ತೂರುವುದಕ್ಕೆ ಮೊದಲು ಪೋಲೀಸರು ಆತನನ್ನು ಪೂರಾ ಹೊಡೆದಿದ್ದರು. ಒಳಗಡೆಗಂತೂ ಆತನಿಗೆ ಸಿಕ್ಕಾಪಟ್ಟೆಯಾಗಿ ಏಟು ಬಿದ್ದಿತ್ತು. ನೆಲಕ್ಕೆ ಹಾಕಿ ಬೂಟಿನಿಂದ ಅವನನ್ನು ತುಳಿದಿದ್ದರು, ಎದೆಯ ಮೇಲೆ ಬಲವಾಗಿ ಒದೆತ ಹಾಕಿದ್ದರು. ಎಂಥ ದೃಢಕಾಯವಾದರೇನು, ಈ ಪೈಶಾಚಿಕ ಅತ್ಯಾಚಾರವನ್ನು ತಡೆದುಕೊಳ್ಳಲು ಸಾಧ್ಯವಾದೀತೇ? ಶಂಕರನ ಮುಖದಿಂದ ಒಂದೇ ಸಮನೆ ನೆತ್ತರ ಚಿಮ್ಮುತ್ತಿತ್ತು. ಆದರೂ ಆತ ಎದೆಗುಂದಿರಲಿಲ್ಲ. ಸೋತು ಹೋಗಿರಲಿಲ್ಲ. 'ಅಯ್ಯೋ' ಎಂಬ ಆರ್ತಧ್ವನಿ ಒಂದು ಸಲವೂ ಬರಲಿಲ್ಲ ಅವನ ಮುಖದಿಂದ. ಸುರಿಯುತ್ತಿದ್ದ ನೆತ್ತರವನ್ನು ಅಂಗಿಯಿಂದೊರೆಸಿಕೊಳ್ಳುತ್ತಾ ಆತ ಅಂಥ ಸಮಯದಲ್ಲೂ ಸೆರೆಯಾಳು ಬಂಧುಗಳಿಗೆ ನೆರವು ನೀಡಲು ಪ್ರಯತ್ನಿಸುತ್ತಿದ್ದ. ಚಿಕ್ಕ ವಯಸ್ಸಿನ ಕೋಮಲ ಹುಡುಗನೊಬ್ಬ ಪೋಲೀಸರ ಅಡಿಗಳಿಗೆ ಬೀಳುವುದರಲ್ಲಿದ್ದಾಗ ಶಂಕರ ಸರ್ವ ಸಾಹಸ ಮಾಡಿ ಆತನನ್ನುಳಿಸಿಕೊಂಡ!

ರಾತ್ರಿ ಒಂದು ಗಂಟೆಯ ವರೆಗೂ ಈ ಭೀಕರ ಹಿಂಸೆ ಎಡೆಬಿಡದೆ ನಡೆದಿತ್ತು. ನೂರಾರು ಎಳೆಜೀವಿಗಳ ತಲೆ ಒಡೆದು, ಅನೇಕರ ನೆತ್ತರ ಹೀರಿ, ಅನೇಕರನ್ನು ಬೂಟಿನಿಂದ ತುಳಿದು, ಅನೇಕರನ್ನು ಸಾವಿನ ಬಾಗಿಲಿನ ವರೆಗೆ ದೂಡಿದರೂ ಸಮಾಧಾನವಾಗಿರಲಿಲ್ಲ ಆ ಪೋಲೀಸರಿಗೆ. ಕೊನೆಗೆ ಅಧಿಕಾರಿಯ ಆಜ್ಞೆಯಂತೆ ಅವರೆಲ್ಲಾ ಚದುರಿಹೋದರು.

ನಮಗಾಗಿ ಮಾಡಿದ್ದ ಅಡಿಗೆಯನ್ನೆಲ್ಲಾ ಆ ಶೂರ ಪೋಲೀಸರಿಗೆ ಬಡಿಸಿದರು. ನಮ್ಮನ್ನೆಲ್ಲಾ ಹೊಡೆದು ಹಸಿದಿದ್ದ ಆ ವೀರಾಗ್ರಣಿಗಳು ನಮ್ಮ ಪಾಲಿನ ಅನ್ನವನ್ನೂ ತಿಂದು ಸಮಾಧಾನಪಟ್ಟುಕೊಂಡರು.

ನಮ್ಮಲ್ಲಿ ಏನಿಲ್ಲವೆಂದರೂ ಇನ್ನೂರು ಜನ ವಿಪರೀತ ಗಾಯಗೊಂಡಿದ್ದೆವು. ಸುಮಾರು ಎಂಭತ್ತು ಜನಕ್ಕಂತೂ ಭೀಕರ ಏಟು ಬಿದ್ದಿತ್ತು. ಮೂವರು ಅತ್ಯಂತ ಚಿಂತಾಜನಕವಾದ ಸ್ಥಿತಿಯಲ್ಲಿದ್ದರು.

ಹೇಗೆ ಬರೆಯಲಿ ಈ ವಿಚಾರವನ್ನು ನಾನು? ಈ ಮೂವರಲ್ಲಿ ನನ್ನ ಶಂಕರ ಒಬ್ಬನಾಗಿದ್ದ.

ಆತನ ಆ ಅತ್ಯವಸ್ಥ ಸ್ಥಿತಿಯಲ್ಲಿ ಅವನನ್ನು ಉಪಚರಿಸಲು ನಾನು

ಅವನ ಹತ್ತಿರ ಇರಲೂ ಸಾಧ್ಯವಿರಲಿಲ್ಲ. ಅವನನ್ನು ಸೆರೆಮನೆಯ ಆಸ್ಪತ್ರೆಗೆ ಸಾಗಿಸಿಕೊಂಡು ಹೋದರು.

ಹಸಿವೆಯ ಬಾಧೆಯಿಂದಲೂ, ಏಟುಗಳ ನೋವಿನಿಂದಲೂ ನರಳುತ್ತಾ ನಾವೆಲ್ಲರೂ ನಮ್ಮ ನಮ್ಮ ಬರಾಕುಗಳಲ್ಲಿ ಬಿದ್ದುಕೊಳ್ಳಬೇಕಾಯಿತು.

ಹಾಸುಗೆಗಳ ಮೇಲೆ ಬಿದ್ದುಕೊಂಡದ್ದೆಷ್ಟೋ ಅಷ್ಟೆ. ಕಣ್ಣು ಮುಚ್ಚುವುದಾಗಲಿ, ನಿದ್ರೆ ಮಾಡುವುದಾಗಲಿ ಯಾರಿಗೂ ಸಾಧ್ಯವಿರಲಿಲ್ಲ. ಎಲ್ಲ ಬರಾಕುಗಳಿಗೂ ಯುದ್ಧಾನಂತರದ ರಣಭೂಮಿಯ ಸ್ವರೂಪ ಬಂದಿತ್ತು. ಸಾಮಾನ್ಯವಾಗಿ ಎಲ್ಲರೂ ಗಾಯಗೊಂಡವರೇ. ಹಲವರು ನರಳುತ್ತಿದ್ದರು. ಹಲವರು ದನಿಯೇರಿಸಿ ಪೋಲೀಸರನ್ನು ಶಪಿಸುತ್ತಿದ್ದರು. ಮುರಿದ ಕೈಕಾಲುಗಳನ್ನು ಸರಿಪಡಿಸಿಕೊಳ್ಳುವವರು ಕೆಲವರು. ಒಡೆದ ತಲೆಗಳಿಗೆ ಪಟ್ಟಿ ಕಟ್ಟುತ್ತಾ ರಕ್ತವನ್ನು ನಿಲ್ಲಿಸಲು ವ್ಯರ್ಥ ಪ್ರಯತ್ನ ಮಾಡುವವರು ಕೆಲವರು. ನನಗೂ ಸಣ್ಣಗೆ ಸುರಿಯುತ್ತಿತ್ತು ರಕ್ತ. ಅದರ ಕಡೆ ಗಮನವಿರಲಿಲ್ಲ. ಆಸ್ಪತ್ರೆಯಲ್ಲಿ ಬಿದ್ದುಕೊಂಡ ಪ್ರೀತಿಯ ಗೆಳೆಯ ಶಂಕರನ ರಕ್ತ ರಂಜಿತ ಶರೀರ ನನ್ನ ಬಗೆಗಣ್ಣಿನೆದುರಿಗೆ ಬಂದು ಸ್ಥಿರವಾಗಿತ್ತು. ದೂರದ ಊರಿನಿಂದ ಅವನ ತಂದೆತಾಯಿಗಳ ಗೋಳಿನ ಕೂಗು ಹಾರಿ ಬಂದು ಕಿವಿಗಳಲ್ಲಿ ಸೇರಿದಂತಾಗುತ್ತಿತ್ತು.

ಸೆರೆಮನೆಯ ಆ ಆಸ್ಪತ್ರೆಯಲ್ಲಿ ಅವನಿಗೆ ದೊರೆಯುವ 'ಚಿಕಿತ್ಸೆ' ಯಿಂದ ಯಾವ ಪ್ರಯೋಜನವೂ ಉಂಟಾಗುವುದಿಲ್ಲವೆಂಬುದೂ ನನಗೆ ಗೊತ್ತಿತ್ತು. ಬರಾಕಿನಲ್ಲಿದ್ದರೂ ಅಷ್ಟೆ. ಆಸ್ಪತ್ರೆಯಲ್ಲಿದ್ದರೂ ಅಷ್ಟೆ. ಅಲ್ಲಿ ದೊರೆಯುವ ಬಣ್ಣದನೀರಿನಿಂದ ನನ್ನ ಶಂಕರ ಬದುಕಿಕೊಳ್ಳುವನೇ? ಅವನು ಬದುಕಬೇಕೆಂಬ ಅಪೇಕ್ಷೆಯಾದರೂ ಈ ಸರ್ಕಾರಕ್ಕೆಲ್ಲಿದ್ದೀತು?

ದೇವರ ಮೇಲೆ ನನಗೆ ನಂಬಿಕೆಯಿರಲಿಲ್ಲ. ಆದರೂ ಆ ಸಮಯದಲ್ಲಿ ಆ ಇಲ್ಲದ ದೇವರನ್ನು ನೆನೆದುಕೊಂಡೆ 'ನನ್ನ ಶಂಕರನನ್ನು ಬದುಕಿಸು ದೇವರೇ! ಆತನನ್ನು ಈ ಭಯಂಕರ ಗಂಡಾಂತರದಿಂದ ಪಾರು ಮಾಡು. ನನ್ನ ಪ್ರಾಣವನ್ನಾದರೂ ತೆಗೆದುಕೊಂಡು ಅದಕ್ಕೆ ಪ್ರತಿಯಾಗಿ ಆತನನ್ನುಳಿಸು.' ಎಂದು ಪ್ರಾರ್ಥಿಸಿದೆ!

ಯಾವ ದೇವರ ಕಿವಿಗೂ ಸೇರಲಿಲ್ಲ ನನ್ನ ಪ್ರಾರ್ಥನೆ. ಎಲ್ಲಾ ವ್ಯರ್ಥವಾಯಿತು!

ಮಾರನೆಯ ದಿನ ಬೆಳಗ್ಗೆ ಶಂಕರನಿಗೆ ರಕ್ತ ವಾಂತಿಯಾಗುತ್ತಿರುವ ಸಮಾಚಾರ ತಿಳಿಯಿತು. ವಿಪರೀತ ಎದೆನೋವಂತೆ. ಡಾಕ್ಟರು ಹೋಗಿ ಆತನನ್ನು ಪರೀಕ್ಷಿಸಿ ಅವನ ಮುಖದಿಂದ ಸುರಿಯುತ್ತಿರುವ ರಕ್ತವನ್ನು ಲೋಟವೊಂದರಲ್ಲಿ ಹಿಡಿದುಕೊಂಡು ಸೆರೆಮನೆಯ ಅಧಿಕಾರಿಗೆ ತೋರಿಸಿದರಂತೆ. ಕಲ್ಲೆದೆಯ ಆ ಅಧಿಕಾರಿ ಅದು ರಕ್ತವೇ ಅಲ್ಲವೆಂದು ವಾದಿಸಿದನಂತೆ.

ಶಂಕರನಿಗೆ ಎಡೆಬಿಡದೆ ರಕ್ತ ವಾಂತಿಯಾಗತೊಡಗಿತು. ಹೀಗೆಯೆ ಇನ್ನು ಕೊಂಚ ಹೊತ್ತು ನಡೆದಲ್ಲಿ ಆತನ ಪ್ರಾಣವುಳಿಯಲಾರದೆಂಬುದು ಎಲ್ಲರಿಗೂ ತಿಳಿದು ಹೋಗಿತ್ತು. ಸೆರೆಮನೆಯ ಆಸ್ಪತ್ರೆಯಲ್ಲಿ ಆತನನ್ನುಳಿಸಲು ಸಾಧ್ಯವಿಲ್ಲವೆಂಬುದಂತೂ ಸ್ಪಷ್ಟವಾಗಿತ್ತು. ಅದಕ್ಕಾಗಿ ತಕ್ಷಣ ಆತನನ್ನು ಹೊರಗಡೆ ನಗರದಲ್ಲಿನ ದೊಡ್ಡ ಆಸ್ಪತ್ರೆಗೆ ಸಾಗಿಸಬೇಕೆಂದು ಎಲ್ಲರೂ ಕೇಳಿಕೊಂಡೆವು. ನಮ್ಮ ಕೇಳಿಕೆ ಕಿವುಡುಗಿವಿಗಳ ಮೇಲೆ ಬಿತ್ತು. ತಮ್ಮ ಅತ್ಯಾಚಾರದಿಂದಾಗಿ ಇಂಥ ಭೀಕರ ಸ್ಥಿತಿಗೊಳಗಾಗಿದ್ದ ಶಂಕರನನ್ನು ಹೊರಗಣ ಪ್ರಪಂಚಕ್ಕೆ ತೋರಿಸುವ ಧೈರ್ಯವೆಲ್ಲಿಂದ ಬಂದೀತು ಅಧಿಕಾರಿಗಳಿಗೆ?

ಸಾಯಂಕಾಲದ ಹೊತ್ತಿನಲ್ಲಿ ಶಂಕರನ ಸ್ಥಿತಿ ತೀರ ವಿಷಮಿಸಿ ಹೋಯಿತು. ಇನ್ನು ಪ್ರಸಂಗ ತಮ್ಮ ಮೈಮೇಲೆ ಬರುವುದೆಂಬುದು ಗೊತ್ತಾಗುತ್ತಲೂ ಅಧಿಕಾರಿಗಳು ನಗರದ ಆಸ್ಪತ್ರೆಯ ಡಾಕ್ಟರನ್ನು ಕರೆಯಿಸಿದರು. ಅವರು ಬಂದು ಶಂಕರನನ್ನು ಪರೀಕ್ಷಿಸಿ ಆತನನ್ನು ತಕ್ಷಣ ಹೊರಗಿನ ಆಸ್ಪತ್ರೆಗೆ ಸಾಗಿಸಿಕೊಂಡೊಯ್ಯಬೇಕೆಂದು ಹೇಳಿದರು.

ಸರಿ. ಆವನನ್ನು ಹೊತ್ತುಕೊಂಡೊಯ್ಯುವ ಸಿದ್ಧತೆಗಳು ನಡೆದವು. ನಮ್ಮೆಲ್ಲರ ಕೊಟಡಿಗಳಿಗೂ ಬೀಗ ಹಾಕಲಾಯಿತು. ಪೋಲೀಸರು ಎಲ್ಲೆಲ್ಲೂ ಕಾವಲು ನಿಂತರು. ಎಂಟು ಜನ ಶಸ್ತ್ರಧಾರಿಗಳಾದ ಪೋಲೀಸರ ಸಮೇತ ‘ಸ್ಟ್ರೆಚರ್’ ಬಂದಿತು. ಭಾರತ ಯುದ್ಧದಲ್ಲಿ ಗಾಯಗೊಂಡು

ಒರಗಿದ ಅಭಿಮನ್ಯುವಿನಂತೆ ತೋರುತ್ತಿದ್ದ ಶಂಕರನನ್ನು ಅದರ ಮೇಲೆ ಮಲಗಿಸಿದರು.

ಅಂಥ ಸ್ಥಿತಿಯಲ್ಲೂ ಶಂಕರನ ಮುಖ ತೇಜಸ್ಸಿನಿಂದ ಹೊಳೆಯುತ್ತಿದ್ದಿತಂತೆ! ಅವನ ತುಟಿಗಳ ಮೇಲೆಲ್ಲಾ ಕೃತಕೃತ್ಯತೆಯ ಸೂಕ್ಷ್ಮ ನಗೆ ತುಳುಕಾಡುತ್ತಿದ್ದಿತಂತೆ!

ನಗರದ ಆಸ್ಪತ್ರೆಯಲ್ಲಿ ಆತನಿಗೆ ದೊರೆತ ಉಪಚಾರವೂ ವ್ಯರ್ಥವಾಯಿತು.

ಕಾಲ ತುಂಬಿ ಬಂದಿತ್ತು.

ಕೊನೆಗೂ ಪೋಲೀಸರ ಅಸುರೀ ಹಿಂಸೆಗೆ ನಮ್ಮ ಶಂಕರ ಬಲಿಯಾದ.

ಎಂಥ ಬಲಿದಾನ ಅದು!

ಕೊನೆಯವರೆಗೂ ಆತ ತನ್ನ ಧೃತಿ ಕಳೆದುಕೊಳ್ಳಲಿಲ್ಲ. ಎದೆಗೆಡಲಿಲ್ಲ. ಅಳುಕಲಿಲ್ಲ, ಅಂಜಲಿಲ್ಲ. ವೀರನಂತೆ ಎಲ್ಲ ಅತ್ಯಾಚಾರವನ್ನೂ ಸಹಿಸಿದ. ಸಹಿಸುತ್ತಾ ಸಹಿಸುತ್ತಾ ಪ್ರಾಣಾರ್ಪಣ ಮಾಡಿದ.

ಸೇನಾಪತಿಯ ಆಜ್ಞೆಯಾಗಿತ್ತು. 'ಮಾಡು! ಇಲ್ಲವೆ ಮಡಿ' ಎಂದು.

ಆ ಸೇನಾಪತಿಯ ನಿಜ ಸೈನಿಕ ನಮ್ಮ ಶಂಕರೂ-ತನ್ನ ಕೈಲಾದುದನ್ನೆಲ್ಲಾ ಮಾಡಿದ-ಮಡಿದ!

ಇನ್ನು ಅವನ ಪ್ರೀತಿಯ ತಂದೆ ತಾಯಿಗಳ ಸ್ಥಿತಿ!

ಅದನ್ನು ಜ್ಞಾಪಿಸಿಕೊಂಡರೂ ಸಹ ಜುಮ್ಮೆನ್ನುತ್ತದೆ ಹೃದಯ!

ಕೌರವರ ಮೋಸಕ್ಕೆ ಬಲಿಯಾಗಿ ವೀರ ಅಭಿಮನ್ಯು ಚಕ್ರವ್ಯೂಹದಲ್ಲಿ ಪ್ರಾಣ ತ್ಯಜಿಸಿದಾಗ ಅರ್ಜುನನಿಗೆ ಎಂಥ ತಳಮಳವಾಗಿತ್ತೋ, ಸುಭದ್ರೆಗೆ ಎಂಥ ಕಳವಳವಾಗಿತ್ತೋ, ಉತ್ತರೆಗೆ ಎಂಥ ದುಃಖ ಆವರಿಸಿತ್ತೋ, ಆ ಎಲ್ಲ ಕಳವಳ ತಳಮಳ ವೇದನೆಗಳನ್ನೂ ಮೀರಿಸುವಂಥ ಅವರ್ಣನೀಯ, ಅನಿರ್ವಚನೀಯ ಶೋಕದ ಮಬ್ಬಿನಲ್ಲಿ ಮುಳುಗಿದೆ ನಮ್ಮ ಸೆರೆಮನೆ.

ಬರಿದಾಗಿದೆ ನಮ್ಮ ಕ್ರಾಂತಿ ಭವನ! ನಮ್ಮೆಲ್ಲರ ಹೃದಯಗಳೂ ಬರಿಯುವಾಗಿವೆ. ಹೊರಟು ಹೋದ ನಮ್ಮ ಅಭಿಮನ್ಯು! ನಮ್ಮೆಲ್ಲರ ನಚ್ಚಿನ ನಾಯಕ, ಪ್ರೀತಿಯ ಬಂಧು, ನಮ್ಮ ನಾಡಿನ ವಿದ್ಯಾರ್ಥಿವೃಂದದ ಆದರ್ಶ ಮೂರ್ತಿ, ಕರ್ನಾಟಕದ ಕಣ್ಣಮಣಿ, ಶಂಕರೂ!

**ಬೆಂಗಳೂರು** **ಮಾರ್ಚಿ ೧೯೪೭**

# ಅಜ್ಞಾತವಾಸಿ

ಮತ್ತೆ ಬರುತ್ತಿದ್ದರು ಆ ಪೋಲೀಸರು !

ಎಂಟು ದಿನಗಳಿಂದ ಎಡೆಬಿಡದೆ ಅವರ ಹಿಂಸೆ ಸಾಗಿತ್ತು ಒಂದೆ ಸಮನೆ. ಆದರೂ ಅವರಿಗೆ ತೃಪ್ತಿಯಾಗಿರಲಿಲ್ಲ.

ಮತ್ತೆ ಬರುತ್ತಿದ್ದರು....!

ಅವರ ಚಿತ್ರಹಿಂಸೆಗೆ ಎದೆಗೊಡಲು ಸಿದ್ಧಳಾಗಿ ಎದ್ದು ಕುಳಿತಳು ನಾಗಮ್ಮ.

ಎಂಟು ದಿನಗಳಿಂದ ಒಂದೆ ಸಮನೆ ಅವರು ಅವಳನ್ನು ಹೊಡೆದಿದ್ದರು. ಲಾಠಿ, ಬೆತ್ತ, ಬೂಟು, ಚಪ್ಪಲಿ—ಕೈಗೆ ಸಿಕ್ಕಿದುದರಿಂದ ಏಟು ಹಾಕಿದ್ದರು. ಅವಳ ಸೀರೆ ಕುಪ್ಪುಸಗಳನ್ನೆಲ್ಲಾ ಸೆಳೆದುಕೊಂಡು ಬತ್ತಲೆಗೊಳಿಸಿ ಆ ನಗ್ನ ಶರೀರದ ಮೇಲೆ ಚರ್ಮದ ಪಟ್ಟಿಯಿಂದ ಬಿಗಿದಿದ್ದರು. ಹತ್ತು ಹನ್ನೆರಡು ಜನ ಸೇರಿಕೊಂಡು ಒಬ್ಬರಾದ ಬಳಿಕ ಇನ್ನೊಬ್ಬರಂತೆ ಸರದಿಯಿಂದ ಅವಳ ಮೈಮೇಲೆ ಬಿದ್ದು ಶೀಲಭಂಗ ಮಾಡಿದ್ದರು. ಅವಳ ಎದೆಯನ್ನೆಲ್ಲಾ ಹಿಸುಕಿ ಹಿಸುಕಿ ಹಿಂಡಿ ಹಿಂಡಿ ಹಿಪ್ಪೆ ಮಾಡಿ ಹಾಕಿದ್ದರು. ಅವಳ ಕೋಮಲ ಶರೀರದ ಮೇಲೆ ಕ್ರೂರ ಪಶುಗಳಿಗಿಂತಲೂ ಕ್ರೂರವಾದ ರೀತಿಯಲ್ಲಿ ಬಿದ್ದು ಭೀಕರ ಅತ್ಯಾಚಾರ ನಡಸಿದ್ದರು. ಆ ಎಳೆ ಶರೀರದಿಂದ ಸುರಿಯುವ ಬಿಸಿ ನೆತ್ತರವನ್ನು ಕಂಡಷ್ಟೂ ಅವರಿಗೆ ಹಿಂಸೆಯ ಹುಚ್ಚು ಕೆರಳುತ್ತಿತ್ತು.

ಆ ಏಟು, ಆ ಅತ್ಯಾಚಾರ, ಆ ರಕ್ತಪಾತ, ಅದನ್ನು ತಾಳಲಾರದೆ ಆ ತರುಣಿ ವಿಲಿವಿಲಿ ಒದ್ದಾಡಿಕೊಂಡಿದ್ದಳು. ಯಾವುದರಿಂದಲೂ ಆ ಪೋಲೀಸರ ಕಲ್ಲು ಹೃದಯ ಕರಗಿರಲಿಲ್ಲ. ದಿನವೂ ಹೊಡೆದದ್ದೇ ಹೊಡೆದದ್ದು! ಅತ್ಯಾಚಾರ ನಡಸಿದ್ದೇ ನಡಸಿದ್ದು! ಹೆಪ್ಪುಗಟ್ಟಿದ ನೆತ್ತರಿನಿಂದ ಹೊಲಸೆದ್ದು ನಾರುತ್ತಿದ್ದ ಆ ಶರೀರವನ್ನು ಸಹ ಪಿಶಾಚಿಗಳಂತೆ ತಬ್ಬಿ ಹಿಡಿದುಕೊಂಡು ಅವರು ಅದರ ಮೇಲೆ ಅತ್ಯಾಚಾರ ನಡಸಿದ್ದರು.

ಇನ್ನೂ ತೃಪ್ತಿಯಾಗಿರಲಿಲ್ಲ ಅವರಿಗೆ.

ಮತ್ತೆ ಬರುತ್ತಿದ್ದರು....!

ಆ ಗುಡಿಸಲಿನ ಸೆರೆಮನೆಯಲ್ಲಿ ಒಬ್ಬಳೇ ನರಳುತ್ತಾ ಬಿದ್ದುಕೊಂಡಿದ್ದ ಹಾಗೆ ನಾಗಮ್ಮ ನೂರು ಬಾರಿ ಯೋಚಿಸಿದ್ದಳು. 'ಯಾರೂ ಇಲ್ಲವೇ ಇವರನ್ನು ತಡೆಯುವವರು? ಯಾರೂ ಇಲ್ಲವೆ?'

ಸಾವಿರ ಬಾರಿಯಾದರೂ ಆಕೆ ಸರ್ವ ರಕ್ಷಕ ಭಗವಂತನನ್ನು ಆರ್ತ ದನಿಯಿಂದ ಕೂಗಿ ಕರೆದಿದ್ದಳು. 'ಕುರು ಸಭೆಯಲ್ಲಿ ದ್ರೌಪದಿಯ ಮಾನ ರಕ್ಷಣೆ ಮಾಡಿದ ಕೃಷ್ಣಾ, ಬಂದು ನನ್ನನ್ನು ಕಾಪಾಡು' ಎಂದು ಆ ಶ್ರೀ ಹರಿಯನ್ನು ಪ್ರಾರ್ಥಿಸಿದ್ದಳು. 'ಭಕ್ತವತ್ಸಲ ಶಿವಶಂಕರಾ, ಬಾರೊ ಬೇಗನೆ, ಬಂದು ನನ್ನನ್ನುಳಿಸು ಈ ಪಿಶಾಚಿಗಳಿಂದ!' ಎಂದು ಹಲುಬಿ ಮೊರೆಯಿಟ್ಟಿದ್ದಳು. ಯಾವ ದೇವರೂ ಬರಲಿಲ್ಲ ಅವಳ ಬಿಡುಗಡೆಗೆ. 'ಯಮದೇವಾ, ನೀನಾದರೂ ಬಂದು ನನ್ನನ್ನೀ ನರಕದಿಂದ ಪಾರುಮಾಡು' ಎಂದು ಮೃತ್ಯುವನ್ನು ಕರೆದಿದ್ದಳು. ಅದಕ್ಕೂ ಸಹ ಕರುಣೆ ಬಂದಿರಲಿಲ್ಲ. ದಿನ ದಿನದ ಆ ಭಯಂಕರ ಹಿಂಸೆಯನ್ನೆಲ್ಲಾ ಸಹಿಸಿಕೊಂಡರೂ ಇನ್ನೂ ಹೋಗದಾಗಿತ್ತು ಆ ಜೀವ.

ಬೂಟುಗಳ ಸದ್ದು ಹತ್ತಿರ ಬಂತು. ಅದೇ ಆ ಪರಿಚಿತವಾದ ಕಡ್ ಕಡ್ ಸದ್ದು—ಬೀಗ ತೆಗೆಯುವಾಗ ಆಗುವ 'ಖಳಲ್' ಎಂಬ ಶಬ್ದ—ಎಲ್ಲ ಶಕ್ತಿಯನ್ನೂ ಎದೆಯಲ್ಲಿ ತುಂಬಿಕೊಂಡು ನಾಗಮ್ಮ ಅವರನ್ನೆದುರಿಸಲು ಸಿದ್ಧಳಾದಳು.

ಬಾಗಿಲು ತೆರೆಯಿತು.

ಅವೇ ಆ ಕ್ರೂರ ಮುಖಗಳೇ! ಇದ್ದಿಲು ಬಣ್ಣದ, ಮೊಸಳೆಯಂಥ ಭೀಕರ ಮುಖಾಕೃತಿಯ ಆ ದಫೇದಾರ್, ಅವನ ಜೊತೆಯ ಆ ಪೋಲೀಸ್ ಶಿಪಾಯಿ....ಮೂರು ದಿನಗಳಿಂದ ಅವರಿಬ್ಬರೇ ಬರುತ್ತಿದ್ದರು. ಮತ್ತೆ ಮತ್ತೆ ಅದೇ ಪ್ರಶ್ನೆ. ಅದೇ ಅತ್ಯಾಚಾರ. ಎಲ್ಲವನ್ನೂ ಮುಗಿಸಿಕೊಂಡು, ಜತೆಗೆ ತಂದಿದ್ದ ತಂಗಳು ರೊಟ್ಟಿಯ ತುಂಡೊಂದನ್ನು ಅವಳ ಮೈಮೇಲೆ ಬಿಸುಟ, ಮೂಲೆಯಲ್ಲಿದ್ದ ಮಡಕೆಗೆ ಹೊಲಸು ನೀರನ್ನು ತುಂಬಿ, ಬಾಗಿಲು ಹಾಕಿಕೊಂಡು, ಬೀಗ ಜಡಿದು ಹೊರಟು ಹೋಗುತ್ತಿ

ದ್ದರು. ಬೆಳಗ್ಗೆ ಮತ್ತು ಸಾಯಂಕಾಲ—ದಿನವೂ ಎರಡು ಹೊತ್ತೂ ತಪ್ಪ ದಂತಿರಲಿಲ್ಲ ಈ ಕ್ರಮ.

ಅವಳನ್ನು ಸೋಲಿಸಬೇಕೆಂದು ಅವರು ಕೈಗೊಂಡ ಹಿಂಸಾಕ್ರಮ ಗಳೆಲ್ಲ ವ್ಯರ್ಥವಾಗಿದ್ದವು. ಯಾವ ಉಪಾಯವೂ ಅವಳ ಬಾಯಿ ಬಿಡಿ ಸಲು ಸಮರ್ಥವಾಗಿರಲಿಲ್ಲ. 'ಮಾತಾಡು, ನಮ್ಮ ಪ್ರಶ್ನೆಗೆ ಉತ್ತರ ಕೊಡು. ನಿನ್ನನ್ನು ಬಿಟ್ಟುಬಿಡ್ತೀವೆ' ಎಂದು ಅವರು ಗಂಟಲು ಹರಿ ಯುವಂತೆ ಆಕ್ರೋಶ ಮಾಡಿದರೂ, ಅವಳ ಬಾಯ ಮೇಲೆ ಬೂಟು ಗಾಲು ಹಾಕಿ ಹೊಡೆದರೂ ಆಕೆ ಸೋತುಹೋಗಿರಲಿಲ್ಲ. ಬೂಟಿನ ಮೊಳೆ ಗಳ ಆಘಾತದಿಂದಾಗಿ ತುಟಿ ಒಡೆದು, ಹಲ್ಲು ಮುರಿದು ರಕ್ತ ಸುರಿಯು ತ್ತಿದ್ದರೂ ಸಹ ಆಕೆ ಕಂಗೆಟ್ಟಿರಲಿಲ್ಲ.

ಅವಳ ಆ ದೃಢ ನಿರ್ಧಾರ ಅವರಿಗೆ ಚೆನ್ನಾಗಿ ಮನವರಿಕೆಯಾಗಿ ದ್ದರೂ ಇನ್ನೂ ಅವರು ಹಿಂದೆಗೆದಿರಲಿಲ್ಲ. ನಿರಾಶರಾಗಿರಲಿಲ್ಲ. ದಿನವೂ ಬರುತ್ತಲೇ ಇದ್ದರು. ದಿನವೂ ಅವಳನ್ನು ಹೊಡೆದು, ಬಡಿದು ಪೀಡಿಸು ತ್ತಲೇ ಇದ್ದರು.

ಈಗಲೂ ಬಂದಿದ್ದರು!

ದಫೇದಾರನ ಬೂಟುಗಾಲು ಭರದಿಂದ ಬೀಸಿಬಂದು ಅವಳ ಸೊಂ ಟದ ಮೇಲೆ ಬಿತ್ತು. ಅದರ ಆಘಾತಕ್ಕೆ ಆಕೆಯ ದೇಹ ಪುಟಿದು ಕೊಂಚ ದೂರ ಹೋಗಿ ಬಿದ್ದುಕೊಂಡಿತು. ಒದೆತದಿಂದಾಗಿ ಹೆಚ್ಚಿನ ಯಾವ ನೋವೂ ತಲೆದೋರಿದಂತಾಗಲಿಲ್ಲ. ಸೊಂಟದ ಮೂಳೆ ಯಾವಾ ಗಲೋ ಅವರ ಪದಹತಿಗೆ ಸಿಕ್ಕಿ ಮುರಿದುಹೋಗಿತ್ತು. ಭಾವಿಯ ನೀರಿ ನಲ್ಲಿ ಕಲ್ಲು ಬಿದ್ದಾಗ ಅದರಲ್ಲಿ ಕೊಂಚಕಾಲ ತೆರೆಗಳ ಕುಣಿತ ನಡೆಯು ವಂತೆ ಅವಳ ಶರೀರದಲ್ಲಿ ಒಂದೆರಡು ಕ್ಷಣಗಳ ಕಾಲ ಒಂದು ತರದ ವಿಲ ಕ್ಷಣ ಅಲೆಗಳೆದ್ದು ಮಾಯವಾದವು. ಅಷ್ಟೆ.

'ಇನ್ನೂ ಇಳೀಲಿಲ್ಲವೇನೇ ನಿನ್ನ ಸೊಕ್ಕು? ಮಾತಾಡುತ್ತೀಯೋ ಇಲ್ಲೋ?' ಎಂದ ದಫೇದಾರ ಮತ್ತೊಂದು ಬಾರಿ ಅವಳ ಸೊಂಟಕ್ಕೆ ಒದೆತ ಹಾಕುತ್ತ.

'ಹೇಳು ಹೊಲೆಮುಂಡೆ, ಎಲ್ಲಿ ಅಡಗಿದ್ದಾನೆ ನಿನ್ನ ಗಂಡ? ಯಾಕೆ

ಮಾತಾಡೋದಿಲ್ಲ ನೀನು? ಇನ್ನೂ ಎಷ್ಟು ಅಂತ ಹೊಡೆಸಿಕೊಳ್ಳುತ್ತೀ?' ಎನ್ನುತ್ತಿದ್ದ ಹಾಗೇ ಆತ ಅವಳ ಎದೆಯನ್ನೊಂದು ಸಲ ಕ್ರೂರವಾಗಿ ಹಿಸುಕಿದ.

'ಹೇಳು ಹಡಬೆ ಮುಂಡೆ, ಪ್ರಾಣ ಉಳಿಸಿಕೋ. ಎಲ್ಲಿದ್ದಾನೆ ಹೇಳು ನಿನ್ನ ಚೆನ್ನ್ಯಾ? ಮಾತಾಡು....ಮಾತಾಡು...." ಮತ್ತೆ ಒದೆತಗಳು.... ಮತ್ತೆ ಹೊಡೆತಗಳು....ಮತ್ತೆ-ಏಟುಗಳು....ಎಲ್ಲವನ್ನೂ ಹೇಗೋ ತಡೆದು ಕೊಂಡು ಅಲ್ಲಿ ಇಲ್ಲಿ ಉರುಳಾಡುತ್ತ ಬಿದ್ದಿತ್ತು ಅವಳ ಶರೀರ. ಮುಖ ದಿಂದ ಮಾತು ಬರುವಂತಿರಲಿಲ್ಲ. ಮಾತನಾಡಲು ಅವಳಿಗೆ ಎಚ್ಚರವೂ ಇರಲಿಲ್ಲ.

ಐದಾರು ದಿನಗಳ ಸತತ ಪ್ರಯತ್ನದಿಂದಲೂ ಸಹ ಆಕೆ ಬಾಯಿ ಬಿಚ್ಚದಿರುವುದನ್ನು ಕಂಡು ದಫೇದಾರನಿಗೆ ಭೀಕರ ಕೋಪವೇರಿತು. ಅವಳ ಬಾಯಿಯನ್ನು ಬಲವಂತವಾಗಿ ತೆರೆದು ಅದರೊಳಗಿನ ನಾಲಗೆ ಯನ್ನು ಹಿಡಿದು ರಭಸದಿಂದ ಎಳೆಯುತ್ತ 'ಮಾತಾಡು ಸೂಳೇಮಗಳೆ, ಎಲ್ಲಿದ್ದಾನೆ ಹೇಳು ನಿನ್ನ ಚೆನ್ನ್ಯಾ?' ಎಂದು ಕೂಗಿಕೊಂಡ.

ನಾಗಮ್ಮನಿಗೆ ಎಚ್ಚರ ಬಂತು; ದಫೇದಾರ ನಡಸಿದ ಕೃತ್ಯದ ಅರಿ ವಾಯಿತು. ತನ್ನಲ್ಲಿ ಉಳಿದಿದ್ದ ಎಲ್ಲ ಶಕ್ತಿಯನ್ನೂ ಹಲ್ಲುಗಳಿಗೆ ಒಟ್ಟುಗೂ ಡಿಸಿ ಅವನ ಕೈಯ್ಯನ್ನು ಬಲವಾಗಿ ಕಚ್ಚಿಬಿಡಲಾ ಎನ್ನಿಸಿತು ನಾಗಮ್ಮನಿಗೆ. ನಾಗರ ಹಾವಿನ ಹಲ್ಲಿನಲ್ಲಿರುವ ವಿಷವಾದರೂ ತನ್ನ ಹಲ್ಲಿನಲ್ಲಿದ್ದಿದ್ದರೆ— ಒಂದು ಕಡಿತಕ್ಕೇ ಉರುಳಿಬಿದ್ದು ಒರಲಿ ಒರಲಿ ಪ್ರಾಣ ಬಿಡುತ್ತಿದ್ದ ಈ ಪಿಶಾಚಿ ಎಂದುಕೊಂಡಳು....ಎಲ್ಲಾ ಬರೀ ಎಣಿಕೆಯೆ....ಎಲ್ಲಾ ಬರೀ ಯೋಚನೆಯೇ....

ದಫೇದಾರ ಮತ್ತೆ ಕಿರಿಚಿಕೊಳ್ಳುತ್ತಿದ್ದ.

'ಹೇಳು ಎಲ್ಲಿದಾನೆ ಆ ನಿನ್ನ ಗಂಡ? ಭಂಡ ಸೂಳೇಮಗ ಎಲ್ಲಿ ಅಡ ಗಿದ್ದಾನೆ ಹೇಳಿಯು ಹಾಗೆ?'

ಭಂಡ! ಹೇಡಿ! ಅದೂ ತನ್ನ ಗಂಡ! ನಾಗಮ್ಮನ ಸ್ವಾಭಿಮಾನ ಕುದಿದೆದ್ದಿತು. ನೋವು ಸಹಿಸಿ ಸಹಿಸಿ ಕುಗ್ಗಿಹೋದ—ಆದರೂ ಅತ್ಯಂತ ತೀವ್ರವಾದ ದನಿಯಲ್ಲಿ ಗುಡುಗಿದಳು.

'ಯಾರಿಗೆ ಭಂಡ ಅಂತೀಯೋ ಷಂಢಾ! ಹೆಂಗಸರ ಮ್ಯಾಲೆ ಕೈ ಎತ್ತುವ ನಿಮ್ಮಂಥ ಹೇಡಿಗಳಂಥವನಲ್ಲ ನನ್ನ ಗಂಡ! ಥೂ! ನಿಮ್ಮ ಮುಖಕ್ಕೆ ಬೆಂಕಿ ಹಾಕಲಿ! ನಾಚಿಕೆಯಾಗೋದಿಲ್ಲವೆ ನಿಮಗೆ?'

ಇಲ್ಲ. ನಾಚಿಕೆಯಾಗುವಂತಿರಲಿಲ್ಲ ಅವರಿಗೆ. ಅವಳು 'ಥೂ' ಎಂದಷ್ಟೂ ಆ ಪೋಲೀಸಿನವನಿಗೆ ಕೋಪ ಹೆಚ್ಚುತ್ತ ಬಂತು. ಮತ್ತೆ ಭೀಕರವಾಗಿ ಏಟು ಹಾಕತೊಡಗಿದ. ಈ ಮೊದಲು ಅನೇಕ ಸಲ ಎಳೆದು ಎಳೆದು ಉದುರಿ ಹೋಗಿದ್ದರೂ ಸಹ ಇನ್ನೂ ಕೊಂಚ ಉಳಿದುಕೊಂಡಿದ್ದ ಅವಳ ತಲೆ ಕೂದಲನ್ನು ಹಿಡಿದು ಗುಡಿಸಿಲಿನ ತುಂಬೆಲ್ಲಾ ದರದರನೆ ಎಳೆದಾಡಿದ. ಮತ್ತೆ ಹೊಡೆದ. ಮತ್ತೆ ಎಳೆದ. ಬೂಟುಗಾಲಿನಿಂದ ತುಳಿದ. ಅವಳು ಮತ್ತೆ ಎಚ್ಚರದಪ್ಪಿ ಬೀಳುತ್ತಲೂ ಮುಖದ ಮೇಲೆಲ್ಲ ನೀರು ಹಾಕಿ ಬಲವಂತವಾಗಿ ಎಚ್ಚರಿಸಿದ.

ಕಣ್ಣೆವೆಗಳನ್ನು ಬಿಚ್ಚಿಕೊಂಡು ಹೊರಕ್ಕೆ ದೃಷ್ಟಿಯನ್ನೋಡಿಸುವುದೂ ಅಸಾಧ್ಯವಾಗಿತ್ತು ನಾಗಮ್ಮನಿಗೆ. ಕಣ್ಣುಗಳ ಮೇಲೂ ಏಟು ಬಿದ್ದಿತ್ತು. ಅಲ್ಲಿಂದಲೂ ನೆತ್ತರು ಸುರಿಯುತ್ತಿತ್ತು.

ಬಾಗಿಲು ಹಾಕಿಕೊಂಡು ಹೊರಡುತ್ತಿದ್ದ ಹಾಗೆ ದಫೇದಾರ ಕೂಗಿಕೊಂಡದ್ದು ಕೇಳಿಸಿತು.

'ಇಂದು ಸಾಯಂಕಾಲ ಅವನಿರುವ ಜಾಗ ತಿಳಿಸಿದರೆ ಸರಿ. ಇಲ್ಲದಿದ್ದರೆ ಸಿಗಿದುಹಾಕ್ತೇನೆ- ಕಂಭಕ್ಕೆ ಕಟ್ಟಿ ಚಮಡ ಸುಲೀತೇನೆ.'

ಇದುವರೆಗೆ ನೂರು ಸಲವಾದರೂ ಆ ಮಾತು ಬಂದಿರಬಹುದು ಅವನ ಮುಖದಿಂದ. ದಿನವೂ ಸಿಗಿಯುವುದೂ ನಡೆದಿತ್ತು. ಚರ್ಮ ಸುಲಿಯುವುದೂ ನಡೆದಿತ್ತು. ಆದರೂ ಪ್ರಾಣ ಹೋಗಿರಲಿಲ್ಲ. ಆತ್ಮ ಹತ್ಯೆ ಮಾಡಿಕೊಳ್ಳುವುದೂ ಸಹ ಸಾಧ್ಯವಿರಲಿಲ್ಲ ನಾಗಮ್ಮನಿಗೆ. ಅದನ್ನೂ ಅಸಾಧ್ಯವಾಗಿ ಮಾಡಿದ್ದರವರು. ಅಂಥ ಪ್ರಯತ್ನಕ್ಕೆ ಅವಳು ತೊಡಗಬಾರದೆಂದು ಯೋಚಿಸಿ ಅಲ್ಲಿ ಒಂದು ಬಟ್ಟೆಯ ತುಂಡನ್ನೂ ಉಳಿಸಿರಲಿಲ್ಲ. ಅವಳ ಸೀರೆ, ಕುಪ್ಪುಸಗಳನ್ನಂತೂ ಎಂದೋ ಸೆಳೆದೊಯ್ದಿದ್ದರು, ಗುಡಿಸಿಲಿನಲ್ಲಿದ್ದ ಹಗ್ಗಗಳನ್ನೂ, ದಾರಗಳನ್ನೂ ಒಂದನ್ನೂ ಬಿಡದೆ ಸಾಗಿಸಿಕೊಂಡು ಹೋಗಿದ್ದರು.

ಗುಡಿಸಿಲಿಗೆ ಬೆಂಕಿ ಹತ್ತಿಸಿ ಅದರೊಳಗಡೆ ಸುಟ್ಟುಕೊಂಡಾದರೂ ಸಾಯುಬಹುದಾಗಿತ್ತು.

ಅದೂ ಸಾಧ್ಯವಿರಲಿಲ್ಲ. ಬೆಂಕಿಯೂ ಸಿಕ್ಕುವಂತಿರಲಿಲ್ಲ. ಬೆಂಕಿ ಪೆಟ್ಟಿಗೆಯೂ ಸಿಕ್ಕುವಂತಿರಲಿಲ್ಲ.

—ಕತ್ತಲ ರಾತ್ರಿಯಲ್ಲಿ ಹೊರಗಡೆ ಸ್ವೇಚ್ಛೆಯಾಗಿ ಸಂಚರಿಸುವ ಸರ್ಪಗಳಾದರೂ ಬರಬಾರದೇ ತನ್ನ ಈ ಗುಡಿಸಿಲಿನ ಸೆರೆಮನೆಯಲ್ಲಿ?— ಎಂದುಕೊಂಡಿದ್ದಳು ನಾಗಮ್ಮ.

—ಅವುಗಳ ತೀಕ್ಷ್ಣ ಕಣ್ಣುಗಳ ಹೊಳಪನ್ನು ಕಂಡು ತಾನು ಅವನ್ನು ಗುರುತಿಸಿಯಾಳು. ದರ್ಶನ ಕೊಡಲು ಬಂದ ದೇವರನ್ನು ಸ್ವಾಗತಿಸುವಂತೆ ತಾನು ಅವನ್ನು ಸ್ವಾಗತಿಸಿಯಾಳು. ಸಂತೋಷದಿಂದ ನಗು ನಗುತ್ತಾ ಅವುಗಳ ಹೆಡೆಗೆ ಕೈ ಹಾಕಿಯಾಳು. ಅವುಗಳ ವಿಷಯುಕ್ತ ಹಲ್ಲು ಕೈಗೆ ಚುಚ್ಚಿದಾಗ ಹರ್ಷದಿಂದ ಕೇಕೆ ಹಾಕಿಯಾಳು ...!

—ಹಾವುಗಳು ಬರದಿದ್ದರೆ ಹೋಗಲಿ, ಹಿಂದೊಮ್ಮೆ ತಮ್ಮ ಹಳ್ಳಿಯ ತುಂಬೆಲ್ಲಾ ತಾಂಡವನೃತ್ಯಗೈದ ಪ್ಲೇಗಿನ ಮಾರಿಯಾದರೂ ಏಕೆ ಬರಬಾರದೋ ತನ್ನ ಬಳಿಗೆ?

—ರೈತರ ಮನೆಗಳನ್ನೆಲ್ಲ ಸುಟ್ಟು ಬೂದಿ ಮಾಡಿದ ಆ ಅಗ್ನಿಜ್ವಾಲೆ ಅದೇಕೆ ಸುಳಿಯಲಿಲ್ಲವೋ ಈ ಗುಡಿಸಲಿನ ಒಳಗೆ?

ಆ ಜ್ವಾಲೆಯನ್ನಿತ್ತ ಹಾರಿಸಿ ತರಲು ಗಾಳಿಗೆ ಕೂಡ ಮನಸು ಬರಲಿಲ್ಲವೆ?

ನಿಸರ್ಗವೆಲ್ಲ ಒಂದುಗೂಡಿ ಭೀಕರ ಸಂಚು ಹೂಡಿದೆಯೋನೋ ತನ್ನ ವಿರುದ್ಧವಾಗಿ?

ಛೆ! ತನ್ನ ಗಂಡ! ತನ್ನ ಪ್ರಾಣಪ್ರಿಯ ಗಂಡ! ಎಲ್ಲಿದ್ದಾನೆ ಆತ? ಯಾವ ಕಾಡಿನಲ್ಲಿದಾನೆ? ಎಲ್ಲಿ ಅಲೆಯುತ್ತಿದಾನೆ? ಎಷ್ಟು ಕಷ್ಟಪಡುತ್ತಿದಾನೊ, ಎಂಥ ಯಾತನೆ ಅನುಭವಿಸುತ್ತಿದಾನೊ!—

ತನಗೊದಗಿದ ಅಂಥ ಭೀಕರಸ್ಥಿತಿಯಲ್ಲೂ ನಾಗಮ್ಮನಿಗೆ ತನ್ನ ಗಂಡನ ಸಂಕಟಗಳ ವಿಚಾರ ಬಂದು ಹೃದಯ ಕುದಿಯತೊಡಗಿತು. ಅವನ ತೊಂದರೆಗಳನ್ನು ಕುರಿತು ಯೋಚಿಸಿದ ಹಾಗೆಲ್ಲ ತನ್ನ ನೋವು ಮರೆತು

ಹೋಗತೊಡಗಿತು. ಎಂಟು ದಿನಗಳಿಂದ ರೊಟ್ಟಿ ಇಳಿದಿರಲಿಲ್ಲ ಅವಳ ಹೊಟ್ಟೆಗೆ. ಅಂಥ ಸ್ಥಿತಿಯಲ್ಲೂ ಆಕೆಗೆ ಗಂಡನ ಊಟದ ನೆನಪಾಯಿತು. ಅವನಿಗೆ ರೊಟ್ಟಿ ಸಿಕ್ಕುತ್ತಿದೆಯೋ ಇಲ್ಲವೋ ಎಂದುಕೊಂಡು ಅವಳ ಕಣ್ಣುಗಳಲ್ಲಿ ನೀರು ಚಿಮ್ಮಿಬಂತು.

ಅಂದು ರಾತ್ರಿ ಹಳ್ಳಿಯನ್ನು ಬಿಟ್ಟು ತೊಲಗುವಾಗ ತನ್ನನ್ನು ಎಂದೆಂದೂ ಬಿಡಲಾರದಂತೆ ಬಿಗಿದಪ್ಪಿಕೊಂಡು, ಕೆನ್ನೆಗೆ ಕೆನ್ನೆ ಇಟ್ಟು ಸವರುತ್ತಾ, ತಲೆಗೂದಲನ್ನು ನೇವರಿಸುತ್ತಾ 'ಹೆದರಬೇಡ ನಾಗೂ, ಈ ಗಲಾಟೆ ಎಲ್ಲಾ ಮುಗಿದ ಬಳಿಕ ಮತ್ತೆ ಬರ್ತೇನೆ. ನನಗಾಗಿ ಧೈರ್ಯದಿಂದ ಕಾದಿರು' ಎಂದು ಭರವಸೆ ಕೊಟ್ಟು, ಅಗಲಲಾರದೆ ಅಗಲಲು ಸಿದ್ಧವಾಗಿ ನಿಂತಾಗಿನ ಆತನ ಪ್ರೇಮಮೂರ್ತಿ ಮತ್ತೆ ಅವಳ ಕಣ್ಣೆದುರು ಬಂತು.

'ಎಂದಿಗೆ ಮುಗಿಯುವುದೋ ಈ ಪೋಲೀಸ್ ರಾಜ್ಯ? ಎಂದು ಇವರೆಲ್ಲಾ ಇಲ್ಲಿಂದ ಹೊರಡುವರೋ? ಎಂದು ಬರುತ್ತಾನೋ ನನ್ನೊಡೆಯ? ನಾನೆಂದು ಅವನ್ನ ನೋಡುತ್ತೇನೋ? -ಇಲ್ಲ- ಹೀಗೇ ಈ ಪೋಲೀಸರ ಹಿಂಸೆಗೆ ಬಲಿಯಾಗಿ ಪ್ರಾಣ ನೀಗುತ್ತೇನೋ?

'ಅಯ್ಯೋ, ನನ್ನೊಡೆಯಾ, ಎಲ್ಲಿದ್ದೀಯೋ ನೀನು? ಒಂದು ಸಲವಾದರೂ ಮುಖ ತೋರಿಸು. ನಿನ್ನ ಮುದ್ದು ಮುಖ ನೋಡಿ ನಿನ್ನ ತೊಡೇ ಮೇಲೆ ತಲೆ ಇಟ್ಟು ಪ್ರಾಣ ಬಿಡ್ತೇನೆ. ಈ ಪಶುಗಳಿಂದ ಹೊಲೆಗೆಟ್ಟ ಈ ಹಾಳು ದೇಹ ನೀಗ್ತೇನೆ!' ಎಂದು ಹಲುಬಿದಳು ನಾಗಮ್ಮ.

ಗುಡಿಸಿಲಿಗೆ ಹತ್ತಿರದಲ್ಲಿದ್ದ ಮಾವಿನ ಮರದ ಮೇಲೆ ಕುಳಿತುಕೊಂಡು ಹಕ್ಕಿಯೊಂದು ಹಾಡುತ್ತಿದ್ದುದು ಕೇಳಿ ಬಂತು. ಆ ಹಕ್ಕಿಯ ಕೂಗಿನ ರೂಪದಲ್ಲಿ ತನ್ನ ಪ್ರಾಣಪ್ರಿಯ ಪತಿಯ ಭರವಸೆಯ ನುಡಿಯೆ ಕೇಳಿಸಿದ ಹಾಗಾಯಿತು ನಾಗಮ್ಮನಿಗೆ. 'ಹೆದರಬೇಡ ನಾಗೂ, ಬರ್ತೇನೆ ನಾನು. ಬಂದು ನಿನ್ನನ್ನೀ ನರಕದಿಂದ ಪಾರುಮಾಡುತ್ತೇನೆ' ಎಂದು ಅಭಯ ಕೊಟ್ಟಂತೆ ಭಾಸವಾಯಿತು.

ಆ ಕಲ್ಪನೆಯ ಮಾತಿನಿಂದಲೂ ಸಹ ಕೊಂಚ ಸಮಾಧಾನವಾಯಿತು ಆಕೆಗೆ ಮೂಲೆಯಲ್ಲಿದ್ದ ರೊಟ್ಟಿಯ ತುಂಡನ್ನೆತ್ತಿ ಬಾಯಿಗಿಟ್ಟುಕೊಳ್ಳಲು ಪ್ರಯತ್ನಿಸಿದಳು. ಎಷ್ಟು ದಿನಗಳಿಗೆ ಹಿಂದೆ ಬೇಯಿಸಿದ್ದೋ ಅದು!

ಒಣಗಿ ಒಣಗಿ ಕಲ್ಲಿನಂತಾಗಿತ್ತು. ಶಕ್ತಿಹೀನವಾದ ಆವಳ ಹಲ್ಲು ಅದನ್ನು ಅಗಿಯುವುದೂ ಅಸಾಧ್ಯವಾಗಿತ್ತು.

ಬಾಯಿಗಿಟ್ಟುಕೊಂಡದ್ದೆಷ್ಟೊ ಅಷ್ಟೆ; ರೊಟ್ಟಿಯನ್ನು ತಿನ್ನಲು ಸಾಧ್ಯವಾಗಲಿಲ್ಲ. ಮತ್ತೆ ಹಠಾತ್ತಾಗಿ ಅವಳಿಗೆ ತನ್ನ ಅಜ್ಞಾತವಾಸಿ ಪತಿಯ ಜ್ಞಾಪಕ ಬಂತು. ಪೋಲೀಸರಿಂದ ಪಾರಾಗುವುದಕ್ಕಾಗಿ ತಲೆ ಮರಸಿಕೊಂಡು, ಅನ್ನ ನೀರಿಲ್ಲದೆ ಕಾಡು ಬೆಟ್ಟ ಸುತ್ತುತ್ತಿದ್ದಾನು ಆತ. ಇಂಥ ನರಕ ಹಿಂಸೆಗೊಳಗಾಗಿದ್ದರೂ ಸಹ ಒಣರೊಟ್ಟಿಯಾದರೂ ಸಿಕ್ಕುತ್ತಿದೆ ತನಗೆ. ಅವನಿಗೆ? ಒಣರೊಟ್ಟಿಗೂ ಸಹ ಗತಿಯಿರಲಿಕ್ಕಿಲ್ಲ. ಏನಾಗಿದ್ದೀತೋ ಆತನ ಸ್ಥಿತಿ?

ರೊಟ್ಟಿ ತಿನ್ನಲು ಮನಸ್ಸಾಗಲಿಲ್ಲ ಅವಳಿಗೆ. ಅದನ್ನು ನೆಲದ ಮೇಲೆಸೆದು ಬಿಟ್ಟು ಹಾಗೇ ಅಲ್ಲಿಯೆ ಒರಗಿಕೊಂಡಳು.

ಅವಳ ಚಿತ್ತದಲ್ಲಿ ಒಂದೇ ವಿಚಾರ:

ಪತಿ! ಪತಿ! ತನ್ನ ಪತಿ!

[ ೨ ]

ಅದೇ ದಿನ, ಅದೇ ಸಮಯದಲ್ಲಿ, ಅಲ್ಲಿಂದ ಇಪ್ಪತ್ತು ಮೈಲಿ ದೂರದಲ್ಲಿದ್ದ ಕಾಡಿನಲ್ಲಿ ಅವಳ ಪತಿಯಾದ ಆ ಅಜ್ಞಾತವಾಸಿ, ಗಿಡವೊಂದರ ನೆರಳಿನಲ್ಲಿ ಅವಳ ಯೋಚನೆಯಲ್ಲೇ ಒರಗಿಕೊಂಡಿದ್ದ.

ಸುತ್ತಲೂ ದಟ್ಟವಾಗಿ ಬೆಳೆದು ನಿಂತಿದ್ದ ಗಿಡಗೆಂಟೆಗಳ ನಿಸರ್ಗ ನಿರ್ಮಿತ ಕೋಟೆಯಂಥ ಸ್ಥಳದಲ್ಲಿ ಆತ ಬಿದ್ದುಕೊಂಡಿದ್ದಾನೆ. ಎಂಟು ದಿನಗಳಿಗೆ ಹಿಂದೆ ಹಳ್ಳಿಯನ್ನು ಬಿಟ್ಟು ಹೊರಟಂದಿನಿಂದ ಅಲ್ಲಿ ಇಲ್ಲಿ ಅಲೆಯುತ್ತಿದ್ದು, ಕಾಡಿನಲ್ಲಿ ಸಿಕ್ಕಿದ ಹಣ್ಣುಕಾಯಿಗಳನ್ನು ತಿಂದು ಜೀವ ಹಿಡಿದುಕೊಂಡಿದ್ದಾನೆ. ಆ ಸತತ ಅಲೆದಾಟ, ಉಪವಾಸಗಳ ಛಾಯೆ ಅವನ ಮುಖದ ಮೇಲೆಲ್ಲ ಮೂಡಿದೆ. ಕುಸ್ತಿಯ ಜಟ್ಟಿಯಂಥ ಬಲಿಷ್ಠವಾದ ಆತನ ಶರೀರ ಸೊರಗಿ ಕೃಶವಾಗಿ ಹೋಗಿದೆ. ಬೆಳೆದ ಗಡ್ಡ ಮೀಸೆಗಳಿಂದ ವಿಲಕ್ಷಣವಾಗಿ, ಕಳಾಹೀನವಾಗಿ ತೋರುವ ಮುಖ. ಕಲ್ಲು ಮುಳ್ಳು ತುಳಿದು ತುಳಿದು ಛಿದ್ರ ಛಿದ್ರವಾದ ಕಾಲು. ಛಿನ್ನ ವಿಚ್ಛಿನ್ನ

ವಾದ ಅಂಗಿ, ಪಂಚೆ. ಜತೆಯಲ್ಲೇ ಯಾವಾಗಲೂ ಅಂಟಿಕೊಂಡಿದ್ದ ಬಂಧನದ ಆಶಂಕೆ ಬೇರೆ.

ಯಾವಾಗ, ಎಲ್ಲಿ, ಎಂಥ ಸನ್ನಿವೇಶದಲ್ಲಿ ಪೋಲೀಸರು ಅವನನ್ನು ಮುತ್ತಬಹುದೆಂಬ ನಿಯಮವಿರಲಿಲ್ಲ. ಜನದ ಕಣ್ಣು ತಪ್ಪಿಸಿ ತಿರುಗುವುದೂ ಅತ್ಯಂತ ಸಾಹಸದ ಕೆಲಸವಾಗಿತ್ತು. ಎಲ್ಲಿಯಾದರೂ ಕೊಂಚ ಅಜಾಗರೂಕತೆಯುಂಟಾದರೆ ಸಾಕು--ಆತ ಸಿಕ್ಕಿಬೀಳಬಹುದಾಗಿತ್ತು. ಅನಂತರ ಗೊತ್ತೇ ಇದೆಯಲ್ಲ—ವಿಚಾರಣೆ....ಫಾಸೀ ಶಿಕ್ಷೆ....ಫಾಸೀ....!

ಶೂಲಕ್ಕೇರಲು ತಾನೇನೂ ಹೆದರುವುದಿಲ್ಲ. ಅದೇನೊ ಸರಿಯೆ.
ಆದರೆ ಶೂಲಕ್ಕೇರುವುದರಿಂದ ಪ್ರಯೋಜನವಾದರೂ ಏನು?
ಯಾವ ಕಾರಣಕ್ಕಾಗಿ ಶೂಲಕ್ಕೇರಬೇಕು ತಾನು?
ಆ ಶಿಕ್ಷೆ ವಿಧಿಸಲು ಇವರಿಗಿರುವ ಅಧಿಕಾರವಾದರೂ ಏನು?

ಅಂದು ತಮ್ಮ ಹಳ್ಳಿಯಲ್ಲಿ ನಡೆದ ದುರಂತ ಘಟನೆಗಳೆಲ್ಲ ಮತ್ತೆ ಅವನ ಒಳಗಣ್ಣಿನೆದುರು ಸುಳಿದುಹೋದವು. ಆಗಸ್ಟ್ ಚಳವಳಿಗಾರಂಭ--ತಮ್ಮ ಹಳ್ಳಿಯಲ್ಲಿ ಸ್ವತಂತ್ರ ರಾಜ್ಯ ಸ್ಥಾಪನೆ— ಪಟೇಲ್ ಶಾನುಭೋಗರ ರಾಜೀನಾಮೆ— ಸ್ವತಂತ್ರ ರಾಜ್ಯವನ್ನು ಮುರಿಯಲು ಬಂದ ಪೋಲೀಸು ಅಧಿಕಾರಿಗಳು—ಹಳ್ಳಿಯ ಕಾವಲು ನಡಸುತ್ತಿದ್ದ ಹುಡುಗರನ್ನವರು ಹೊಡೆದುದು—ಆ ಗಲಾಟೆಯಿಂದಾಗಿ ಹಳ್ಳಿಯ ಜನ ರೇಗಿಬಿದ್ದು ಇನ್ನೂ ಗಲಭೆಯಾದುದು--ಇತ್ತಂಡದ ಹೊಡೆದಾಟದಲ್ಲಿ ಅಧಿಕಾರಿಯೊಬ್ಬ ಗಾಯಗೊಂಡು ಪ್ರಾಣ ಬಿಟ್ಟುದು. ಆ ಸಮಯದಲ್ಲಿ ಹೊಲದಲ್ಲಿ ಕೆಲಸದಲ್ಲಿದ್ದ ತಾನು ಅನಾಹುತದ ಸುದ್ದಿ ಕೇಳಿ ಸ್ಥಳಕ್ಕೆ ಧಾವಿಸಿಬಂದುದು. ಮರು ದಿನ ಮಿಲಿಟರಿಯವರು ಬಂದು ಊರನ್ನೆಲ್ಲ ಕೊಳ್ಳೆ ಹೊಡೆಯುವರೆಂಬ ಸುದ್ದಿ ಹರಡಿದುದು. ಅಂದು ರಾತ್ರಿಯೆ ತಾವೆಲ್ಲರೂ ಹಳ್ಳಿಯನ್ನು ಬಿಟ್ಟು ಹೊರಟುದ್ದು--ಅಬ್ಬ! ಎಂಥ ರುದ್ರ ಘಟನೆಗಳು ಅವು!

ತನ್ನ ಮನಸ್ಸಿಗೆ ವಿರುದ್ಧವಾಗಿ ತಾನೂ ಅಲ್ಲಿಂದ ಹೊರಡಲೇಬೇಕಾಗಿತ್ತು. ಊರ ಹಿರಿಯರು ಒತ್ತಾಯಪಡಿಸಿದರು. 'ಕಾಂಗ್ರೆಸ್ ಪ್ರೇಮಿಗಳಿಗೆಲ್ಲಾ ನೀನೇ ಮುಖಂಡ. ನಿನ್ನನ್ನು ಪೋಲೀಸರು ಬಿಡುವುದಿಲ್ಲ. ಒಬ್ಬ ಅಧಿಕಾರಿಯ ಪ್ರಾಣಕ್ಕಾಗಿ ಅವರು ನಮ್ಮಲ್ಲಿ ಇಪ್ಪತ್ತು ಜನರ

ಪ್ರಾಣವನ್ನಾದರೂ ತೆಗೆದುಕೊಳ್ಳದಿರುವದಿಲ್ಲ. ನಿನ್ನನ್ನಂತೂ ಅವರು ಬಿಡುವುದೇ ಸಾಧ್ಯವಿಲ್ಲ. ಸುಮ್ಮನೇಕೆ ಶೂಲಕ್ಕೇರುತ್ತೀ? ಹೊರಡು; ಹೊರಡು' ಎಂದರು. ಹೊರಡಲೇಬೇಕಾಯಿತು ತಾನು.

ಈಗ ಏನಾಗಿದೆಯೊ ತಮ್ಮ ಹಳ್ಳಿಯ ಗತಿ?

ಆ ಪೋಲೀಸ್ ರಾಜ್ಯ ಅದನ್ನು ಯಾವ ಗತಿಗೀಡು ಮಾಡಿದೆಯೊ? ಎಷ್ಟು ಜನರನ್ನು ಹಿಡಿದಿರುವರೋ? ಎಷ್ಟು ಜನರನ್ನು ಪೀಡಿಸುತ್ತಿರುವರೋ?

ನಾಗು?

ತನ್ನ ಪ್ರೀತಿಯ ನಾಗು?

ಅವಳೂ ಸಿಕ್ಕಿರುವಳೋ ಏನೋ ಅವರ ಕೈಯಲ್ಲಿ?

ಸಿಕ್ಕಿದ್ದರೆ?

ಅಧಿಕಾರಿಯ ಸಾವಿಗೆ ಅವಳೇನೂ ಕಾರಣಳಲ್ಲ: ಯಾವ ಅಪರಾಧವನ್ನೂ ಆಕೆ ಮಾಡಿದವಳಲ್ಲ. ಅದೇನೋ ನಿಜ. ಆದರೆ ಸೇಡಿನಿಂದ ಉನ್ಮತ್ತರಾದ ಆ ಪೋಲೀಸರು ನ್ಯಾಯಾನ್ಯಾಯಗಳ ವಿಚಾರ ಮಾಡುವುದುಂಟೇ? ಕೈಗೆ ಸಿಕ್ಕಿದವರನ್ನೆಲ್ಲ ಅವರು ಪೀಡಿಸಬಹುದು. ಅನನ್ವಿತ ಅತ್ಯಾಚಾರಗಳನ್ನು ನಡಸಬಹುದು....

ನಾಗುವನ್ನೂ ಅವರು ಹಿಡಿದಿದ್ದರೆ?

ಆ ಯೋಚನೆಯೊಂದಿಗೆ ಅವನ ಹೃದಯ ಜುಮ್ಮೆನ್ನುತ್ತಿತ್ತು.

ಹಳ್ಳಿಯಲ್ಲಿ ನಡೆದ ಘಟನೆಗಳ ಬಗ್ಗೆ ಒಂದು ಸುದ್ದಿಯೂ ಅವನಿಗೆ ತಿಳಿಯುವಂತಿರಲಿಲ್ಲ.

ಅಡಗಿಕೊಂಡಿದ್ದ ಕಾಡು ಪ್ರದೇಶವನ್ನು ತೊರೆದು ಜನವಸತಿಯ ಸ್ಥಳಗಳಿಗೆ ಪ್ರವೇಶಿಸಿದರೆ ತಾನೆ ಸುದ್ದಿ ತಿಳಿದೀತು?

ಮುಖದ ಗಡ್ಡ ಸಾಕಷ್ಟು ಬೆಳೆಯುವ ತನಕ, ವೇಷಾಂತರ ಮಾಡಲು ಸಾಧ್ಯವಾಗುವ ತನಕ ಕಾಡು ಬಿಟ್ಟು ಹೊರಡುವುದೂ ಗಂಡಾಂತರದ್ದಾಗಿತ್ತು.

ಅದುವರೆಗೂ ಶಂಕೆ ಕುಶಂಕೆಗಳ ಈ ವಿಲಕ್ಷಣ, ಅಸತ್ಯಗಳ ಗಾಳಿಗೆ ಸಿಲುಕಿ ಹೃದಯ ಒದ್ದಾಡಬೇಕಾಗಿತ್ತು.

ಅಂದೂ ಅಂಥದೇ ಭೀಕರ ಕಳವಳ.

—ತಮ್ಮ ಹಳ್ಳಿಯ ಗತಿ?

—ಪತ್ನಿ ನಾಗೂ ಗತಿ?

ಯಾವುದೂ ತಿಳಿಯಲೊಲ್ಲದು!

ಹಠಾತ್ತಾಗಿ ಅಜ್ಞಾತವಾಸಿ ಬೆಚ್ಚಿಬಿದ್ದು ಎದ್ದು ಕುಳಿತ.

ಸಣ್ಣಗಿನ ದನಿಯಲ್ಲಿ ಯಾರೋ ಕೂಗಿ ಕರೆದುದು ಕೇಳಿಸಿತು.

'ಚೆನ್ನಬಸಪ್ಪಾ ‹ ಽ ಽ' ಎಂದು.

ಕೊನೆಗೂ ಪೋಲೀಸರು ತನ್ನ ಸುಳಿವನ್ನು ಕಂಡುಹಿಡಿದರೊ ಏನೊ, ತನ್ನನ್ನು ಸುಲಭವಾಗಿ ಬಲೆಗೆ ಬೀಳಿಸಲು ಈ ರೀತಿ ಕೂಗುತ್ತಿರುವರೊ ಏನೊ, ಎಂದುಕೊಂಡು ಚೆನ್ನಬಸಪ್ಪ ಹತ್ತಿರ ಇದ್ದ ದೊಣ್ಣೆಯನ್ನೆತ್ತಿ ಕೊಂಡು ಅವರನ್ನೆದುರಿಸಲು ಸಿದ್ಧನಾಗಿ ನಿಂತ.

'ಚೆನ್ನಾ, ಚೆನ್ನಬಸಪ್ಪಾ, ಹಾದಿ ಎಲ್ಲ್ಯೈತ್ಯೋ?' ಮತ್ತೆ ಕೇಳಿಸಿತು ಅದೇ ಕೂಗು.

ಪೋಲೀಸರ ದನಿಯಲ್ಲ ಅದು; ಅವನಿಗೆ ಚಿರಪರಿಚಿತವಾದ ಕರಿಯಪ್ಪನ ದನಿ! ತಮ್ಮ ಪಕ್ಕದ ಮನೆಯ ಮುದುಕ ಕರಿಯ! ಇಲ್ಲಿಯವರೆಗೆ ಹೇಗೆ ಬಂದನೊ—ಎಂದುಕೊಳ್ಳುತ್ತ ಚೆನ್ನಬಸಪ್ಪ ಅತ್ಯಾನಂದದಿಂದ ಮುಂದುವರೆದು ಪೊದೆಯಾಚೆ ನಿಂತುಕೊಂಡು ಹಾದಿಯನ್ನು ಕಾಣದೆ ಗೋಳಾಡುತ್ತಿದ್ದ ಮುದುಕನನ್ನು ಕರೆದುಕೊಂಡು ಬಂದ.

ಬಿಸಿಲಿನಲ್ಲಿ ದಾರಿ ನಡೆದು ನಡೆದು ತುಂಬಾ ಆಯಾಸಗೊಂಡಿದ್ದ ಆ ಮುದುಕ ಗಿಡದ ನೆರಳಿಗೆ ಒರಗಿಕೊಂಡು ಗಾಳಿ ಹಾಕಿಕೊಳ್ಳ ತೊಡಗಿದ.

'ಎಲ್ಲಿಂದ ಬಂದಿಯಪ್ಪಾ ಕರಿಯಣ್ಣಾ?' ಎಂದು ಆತುರದಿಂದ ಕೇಳಿದ ಚೆನ್ನಬಸಪ್ಪ.

'ಊರಿಂದಲೇ ಬಂದೆನಪ್ಪ, ಮೂರು ನಾಲ್ಕು ದಿನದಿಂದ ಹುಡುಕುತ್ತಾ ಇದೀನಿ. ಇವತ್ತು ಸಿಕ್ಕಿ. ತಮ್ಮಾ ಚೆನ್ನಾ, ಈಗಲೇ ಊರಿಗೆ ಹೊರಡಪ್ಪ, ಹೇಗಾದರೂ ಮಾಡು. ಆದರೆ ಊರಿಗೆ ಹೋಗು. ಅಲ್ಲಿ ನಾಗಮ್ಮ ಸಾಯ್ತಾ ಇದಾಳೆ....'

ಚಿನ್ನಬಸಪ್ಪನ ಎದೆ ಡವಡವನೆ ಹೊಡೆದುಕೊಳ್ಳತೊಡಗಿತು. 'ಏನಾಗಿದೆ ಅವಳಿಗೆ ಕರಿಯಣ್ಣಾ?' ಎಂದ.

'ಏನು ಹೇಳ್ಲಿ ತಮ್ಮಾ ನಿನಗೆ? ನೀವೆಲ್ಲಾ ಫರಾರಿ ಆದಾಗ ನಾವು ಮುದುಕರು, ಹೆಣ್ಣುಮಕ್ಕಳು ಆ ಗುಡ್ಡದಾಗ ಅಡಗಿದ್ದೆವಲ್ಲ-ಅಲ್ಲಿಗೇ ಬಂದರು ಪೋಲೀಸರು. ನಮ್ಮೆಲ್ಲರನ್ನು ಹಿಡಿದರು. ಹೊಡೆದರು. ಎಲ್ಲರ ಮನೆಗಳನ್ನು ಲೂಟಿ ಮಾಡಿದರು. ನಾಗಮ್ಮನೂ ಸಿಕ್ಕಿದಾಳೆ ಅವರ ಕೈಯಾಗ. ಏನು ಹೇಳಲಿ ಚಿನ್ನಬಸಪ್ಪಾ, ಅವಳನ್ನ ಹೊಡೆದು ಬಡಿದು ಹೆಣ ಮಾಡಿದಾರಂತೆ ಆ ದೆವ್ವಗಳು. ಈಗ ಆಕೇನ್ನ ಉಳಿಸೋದು ನಿನ್ನಿಂದ ಹೊರತು ಇನ್ನಾರಿಂದಲೂ ಆಗೋದಿಲ್ಲ. ಅದಕ್ಕೇ ನಿನ್ನ ಹುಡುಕಿಕೊಂಡು ಬಂದೆ ನಾನು. ಆ ಪೋಲೀಸರ ಕೈಯಿಂದ ಹೇಗೋ ಪಾರಾಗಿ ಬಂದೆ. ಚಿನ್ನಣ್ಣಾ, ನಾಗಮ್ಮನ ಗತಿ ನೆನೆದರೆ ನನ್ನ ಕರುಳೆಲ್ಲಾ ಹಿಂಡಿದ ಹಾಗಾಗುತೈತಿ. ಈಗಲೇ ಹೋಗಪ್ಪಾ ನೀನು. ಒಂದು ಗಳಿಗೆಯೂ ತಡಮಾಡಬೇಡ....'

'ಆಕೆ ಏನು ಮಾಡಿವಳಪ್ಪಾ ಆ ಪೋಲೀಸರಿಗೆ? ಅವಳನ್ಯಾಕೆ ಪೀಡಿಸ್ತಾ ಇದಾರೆ ಅವರು?' ಎಂದ ಚಿನ್ನಬಸಪ್ಪ ಕಳವಳದಿಂದ ಭಾರವಾದ ದನಿಯಲ್ಲಿ.

'ಯಾಕೆ ಅಂತ ಏನು ಹೇಳೋದಪ್ಪಾ? ಯಾರು ಕೇಳುವವರು ಅವರನ್ನ? ಊರಾಗೆಲ್ಲಾ ಅವರದೇ ರಾಜ್ಯ. ನ್ಯಾಯಾ, ನೀತಿ ಅನ್ನೋದೆಲ್ಲಾ ಗಾಳಿಗೆ ತೂರಿಬಿಟ್ಟಾರ. ನಿನ್ನ ಮೇಲೇ ಅವರಿಗೆ ಕಣ್ಣಿತ್ತು. ನೀನು ಫರಾರಿಯಾದದ್ದು ತಿಳಿಯುತ್ತಲೂ ಅವರ ಹೊಟ್ಟೆಯೊಳಗ ಬೆಂಕಿ ಬಿತ್ತು. ಅದಕ್ಕೇ ನಿನ್ನ ಹೆಂಡತೀನ್ನ ಹಿಡಿದು, ಹೊಡೆದು ಬಡಿದು ಪೀಡಿಸ್ತಾ ಇದಾರೆ. ನೀನು ಇರೋ ಸ್ಥಳವನ್ನ ಆಕೆ ತಿಳಿಸಲಿ ಅಂತ. ಇಲ್ಲಿ ನೀನು ಇರೋದು ಆಕೆಗಾದರೂ ಎಲ್ಲಿ ಗೊತ್ತು? ಗೊತ್ತಿದ್ದರೂ ಆಕೆ ಅವರಿಗೆ ತಿಳಿಸೋದು ಹ್ಯಾಗೆ? ಪ್ರಾಣ ಹೋದರೂ ತಿಳಿಸಲಿಕ್ಕಿಲ್ಲ ಆಕೆ. ಈಗ ಅವಳನ್ನ ಆ ಸೈತಾನರಿಂದ ಉಳಿಸಬೇಕಾದರೆ ನೀನೇ ಹೋಗಬೇಕು. ಹೋಗಪ್ಪಾ, ಬೇಗ ಹೋಗು....'

ಒಂದೆರಡು ಕ್ಷಣ ತನ್ನ ದೇಹದೆಲ್ಲ ಅಂಗಾಂಗಗಳ ಚಲನವಲನವೂ

ನಿಂತು ಹೋದಂತಾಯಿತು ಚೆನ್ನಬಸಪ್ಪನಿಗೆ. ತನ್ನ ಪ್ರೀತಿಯ ಪತ್ನಿಗೊದಗಿದ ಈ ಘೋರ ಸಂಕಟವನ್ನು ತಿಳಿದು ಅವನ ನರನಾಡಿಗಳ ಚಟುವಟಿಕೆಯೇ ನಿಂತಂತಾಯಿತು.

ತಾನು ತಲೆ ತಪ್ಪಿಸಿಕೊಂಡಿರುವುದರಿಂದಲೇ ಇಂಥ ಸ್ಥಿತಿಬಂತು ಅವಳಿಗೆ.... ತನಗಾಗಿಯೆ ಪೋಲೀಸರು ಅವಳನ್ನು ಹಿಂಸಿಸುತ್ತಿರುವುದು.... ಈ ರೀತಿ ಅವಳನ್ನು ಸಾಯಲು ಬಿಟ್ಟು ತಾನು ಇಲ್ಲಿ ಅಜ್ಞಾತವಾಸಿಯಾಗಿದ್ದರೂ ಪ್ರಯೋಜನವೇನು? ದೇಶದಲ್ಲೆಲ್ಲ ಹರಡಿಕೊಂಡಿರುವ ಸರಕಾರಿ ಗೂಢಚಾರರ ಬಲೆಗೆ ಸಿಲುಕಿ ಇಂದಿಲ್ಲ ನಾಳೆಯಾದರೂ ತಾನು ಶೂಲಕ್ಕೇರುವುದು ನಿಶ್ಚಿತ.... ಹೀಗಿರುವಾಗ ಇಂದೇನು, ನಾಳೆಯೇನು? ಎಂದಾದರೂ ತನ್ನ ಪ್ರಾಣ ಹೋಗುವುದೇ! ತನ್ನ ಪ್ರಾಣವೊಂದು ಹೋದರೂ ಹೋಗಲಿ. ತನ್ನ ಪ್ರೀತಿಯ ಪತ್ನಿಯಪ್ರಾಣವಾದರೂ ಉಳಿಯಲಿ. ಉಳಿಯಲೇಬೇಕು. ಉಳಿಸಲೇಬೇಕು. ಅದನ್ನುಳಿಸುವುದು ತನ್ನ ಕೈಯಲ್ಲಿದೆ. ಹೌದು. ತನ್ನ ಕೈಯಲ್ಲೇ ಇದೆ....

ಅವನ ಮನಸ್ಸು ಏನನ್ನೊ ಮೂಕವಾಗಿ ನಿರ್ಧಾರ ಮಾಡಿತು. ಅದರಿಂದಾಗಿ ಅವನ ಹೃದಯದ ಭಾರ ಅರ್ಧಕ್ಕರ್ಧ ಇಳಿದ ಹಾಗಾಯಿತು.

ಮುದುಕ ಹೇಳುತ್ತಲೇ ಇದ್ದ.

'ಒಂದು ಗಳಿಗೇನೂ ತಡಮಾಡಬೇಡ ಚೆನ್ನಪ್ಪಾ. ಈಗಿಂದೀಗಲೇ ಹೊರಡು. ಅವಳನ್ನ ಕೊಲ್ತಾ ಇದಾರೆ ಆ ರಾಕ್ಷಸರು. ಹೋಗು. ಈಗಲೇ ಹೊರಡು. ಅವಳನ್ನುಳಿಸು.'

'ಹೋಗ್ತೇನೆ ಕರಿಯಣ್ಣಾ, ಆದರೆ ಇಲ್ಲಿ ನಿನ್ನ ಗತಿ ಹೇಗೆ? ಮುಪ್ಪಿನ ಮುದುಕ ನೀನು. ಕಾಡು ತಿರುಗಿ ತಿರುಗಿ ದಣಿದುಕೊಂಡು ಬಂದಿದ್ದೀಯ. ಹೊಟ್ಟೆಗೇನು ಮಾಡುತ್ತೀ?'

ಅಂಥ ದಣಿವಿನಲ್ಲೂ ಸಮಾಧಾನದಿಂದ ನಗುತ್ತ ಆ ರೈತ ಮುದುಕ ಉತ್ತರವಿತ್ತ.

'ನನ್ನ ಚಿಂತೆ ಯಾಕಪ್ಪಾ ನಿನಗೆ? ನಾನೆಲ್ಲಾ ನೋಡಿಕೊಳ್ತೇನೆ. ಇಲ್ಲೆಲ್ಲಾದರೂ ಹಣ್ಣು ಗಿಣ್ಣು ಸಿಗುತ್ತವೆ. ತಿಂದು ಕಾಲ ಕಳೀತೇನೆ. ಇಲ್ಲೇ ಸಮೀಪದಾಗಿನ ಹಳ್ಳಿಯೊಳಗ ನಮ್ಮ ಗುರುತಿನವರದೊಂದು

ಮನೆ ಐತೆ. ಅಲ್ಲಿಗೆ ಹೋಗ್ತೇನೆ. ನನ್ನ ವಿಚಾರ ಬಿಟ್ಟು ಬಿಟ್ಟು ಈಗಲೆ ಹೊರಡು ನೀನು.'

ದೊಣ್ಣೆಯನ್ನು ಕೈಗೆತ್ತಿಕೊಂಡು ಹೊರಡಲು ಸಿದ್ಧನಾಗಿ ಚೆನ್ನ ಬಸಪ್ಪ,

'ಎಲ್ಲಿಟ್ಟಿದಾರೆ ನಾಗೂನ್ನ ಗೊತ್ತ್ಯೆತೇನು ನಿನಗೆ?' ಎಂದ.

'ಊರಹೊರಗಿನ ಶಾನುಭೋಗರ ತೋಟದ ಗುಡಿಸಿಲಿನೊಳಗೆ ಇಟ್ಟಾರಂತೆ. ಬೀಗ ಹಾಕಿದಾರಂತೆ. ಭಾವಿಯ ಹತ್ತಾರೆ ಆವರೂ ಬೀಡು ಬಿಟ್ಟಾರ ಡೇರೆಹಾಕಿಕೊಂಡು. ಹುಷಾರಾಗಿ ಹೋಗು. ಅವಳನ್ನ ಬಿಡಿಸಿ ಕೊಂಡು ಬಾ'

'ನಿನ್ನ ಹರಕೆ ಫಲಿಸಲಿ ಅಜ್ಜ!' ಎಂದು ಮನಸ್ಸಿನಲ್ಲೇ ಹೇಳಿಕೊಳ್ಳುತ್ತ ಚೆನ್ನಬಸಪ್ಪ ದೊಣ್ಣೆಯನ್ನೂರುತ್ತಾ ಅಲ್ಲಿಂದ ಹೊರಟ.

ಅವನ ಆಕೃತಿ ಗಿಡಗಳ ಗುಂಪಿನಲ್ಲಿ ಮರೆಯಾಗುವವರೆಗೂ ಮುದುಕ ಅವನನ್ನೇ ನಿಟ್ಟಿಸುತ್ತಿದ್ದು ಅನಂತರ ಸಮಾಧಾನದ ಉಸಿರು ಹಾಕಿ ತನ್ನಷ್ಟಕ್ಕೆ ತಾನೆ ಹೇಳಿಕೊಂಡ.

'ದೇವರೇ, ಭರಮಪ್ಪಾ, ನನ್ನ ಕೆಲಸ ನಾ ಮಾಡಿದೆ. ಇನ್ನು ಅವನ ಕೆಲಸ ಅವ ಮಾಡಲಿ. ಅವರಿಬ್ಬರೂ ಸುಖವಾಗಿ ಆ ನರಕದಿಂದ ಪಾರಾಗಲಿ. ಅಷ್ಟು ಮಾಡಿಕೊಡು ನನ್ನಪ್ಪಾ, ನಿನಗೆ ನಾಲ್ಕು ಕಾಯಿ ಒಡಸ್ತೇನೆ.'

[ ೩ ]

ಕಾಡು ಪ್ರದೇಶವನ್ನು ಹಿಂದೆ ಹಾಕಿ, ಕವಲು ದಾರಿಗಳಲ್ಲಿ ನಡೆದು ಚೆನ್ನಬಸಪ್ಪ ಊರ ಬಳಿ ಬಂದಾಗ ಮಧ್ಯ ರಾತ್ರಿಯಾಗಿತ್ತು.

ಮುಗಿಲಿನಲ್ಲಿ ಮಿನುಗುತ್ತಿದ್ದ ತಾರೆಗಳ ಬೆಳಕಿನಲ್ಲಿ ಶಾನುಭೋಗರ ತೋಟ ಅಸ್ಪಷ್ಟವಾಗಿ ಗೋಚರವಾಗುತ್ತಿತ್ತು. ತೋಟದ ಗಿಡವೊಂದರ ಮರೆಯಲ್ಲಿ ನಿಂತುಕೊಂಡು ಚೆನ್ನಬಸಪ್ಪ ಒಂದೆರಡು ನಿಮಿಷ ಸುತ್ತಲೂ ದೃಷ್ಟಿಯನ್ನೋಡಿಸಿದ. ಮೊಟ್ಟೆಯ ಭಾವಿಯ ಹತ್ತಿರದಲ್ಲಿಯೆ ಡೇರೆಗಳ

ನ್ನು ಹಾಕಿದ್ದರು. ಅವುಗಳಿಗೆ ಇಪ್ಪತ್ತು ಮಾರು ದೂರದಲ್ಲಿಯೆ ಗುಡಿಸಿಲು. ಅದರಲ್ಲಿಯೆ ತನ್ನ ನಾಗುವನ್ನು ಸೆರೆಯಲ್ಲಿಟ್ಟಿರಬಹುದೆಂದು ಆತನಿಗೆ ಹೊಳೆಯಲು ಬಹುಕಾಲ ಬೇಕಾಗಲಿಲ್ಲ. ಆ ಗುಡಿಸಿಲಿನ ಎದುರಿಗೆ ಕೊಂಚ ದೂರದಲ್ಲಿ ಪೋಲೀಸು ಶಿಪಾಯಿಯೊಬ್ಬ ಬಂದೂಕನ್ನು ಕೈಯಲ್ಲಿ ಹಿಡಿದುಕೊಂಡ ಹಾಗೇ ಅರೆನಿದ್ರೆಯಲ್ಲಿ ತಲ್ಲೀನನಾಗಿದ್ದುದು ಕಾಣಿಸಿತು.

ಡೇರೆಗಳಲ್ಲಿನ ಪೋಲೀಸರೆಲ್ಲಾ ನಿದ್ರಾಧೀನರಾಗಿದ್ದುದು ಸ್ಪಷ್ಟವಾಗಿತ್ತು. ಎಲ್ಲಿಯೂ ಯಾವುದೇ ಬಗೆಯ ಚಲನವಲನವೂ ಕಂಡು ಬರುತ್ತಿರಲಿಲ್ಲ.

ಗಿಡದ ಮರೆಯಲ್ಲಿ ಅವಿತುಕೊಂಡಿದ್ದ ಹಾಗೆ ಚೆನ್ನಬಸಪ್ಪ ಇದೆಲ್ಲವನ್ನೂ ನಿರೀಕ್ಷಿಸಿದ. ಕೊಂಚಕಾಲ ಯೋಚಿಸುತ್ತಿದ್ದು ಏನೇನೋ ಎಣಿಕೆ ಹಾಕಿದ. ಅನಂತರ ಜಾಗರೂಕತೆಯಿಂದ ಅಡಿಯಿಡುತ್ತಾ ಕಾವಲಿನ ಪೋಲೀಸ ಮಲಗಿದ್ದ ಸ್ಥಳಕ್ಕೆ ಬಂದ. ಕೊಂಚಕಾಲ ಆತನ ನಿದ್ರಾಮಗ್ನ ಆಕೃತಿಯನ್ನೇ ಸೂಕ್ಷ್ಮವಾಗಿ ನಿಟ್ಟಿಸುತ್ತಿದ್ದು ನಿಜಕ್ಕೂ ಅವನಿಗೆ ನಿದ್ರೆ ಬಂದಿದೆಯೊ ಇಲ್ಲವೋ ಎಂಬುದನ್ನು ಪರೀಕ್ಷಿಸಿದ. ನಿದ್ರೆ ಬಂದಿರುವುದು ನಿಜವೆಂದು ಮನವರಿಕೆಯಾಗುತ್ತಲೂ ಮೆಲ್ಲನೆ ಅವನ ಬಳಿ ಕುಳಿತುಕೊಂಡು ಅವನ ಕೈಯಲ್ಲಿದ್ದ ಬಂದೂಕವನ್ನು ಬಿಡಿಸಿ ತನ್ನ ಕೈಗೆ ತೆಗೆದುಕೊಂಡ. ಆಗಲವಾಗಿ ಬಾಯಿ ತೆರೆದು ದೀರ್ಘ ಉಸಿರು ಬಿಡುತ್ತ ಬಿದ್ದಿದ್ದ ಆತನ ಬಾಯಿಗೆ ಪಕ್ಕದಲ್ಲಿಯೆ ಇದ್ದ ಹುಲ್ಲು ತುರುಕಿದ. ಅನಂತರ ಮಗುವನ್ನೆತ್ತುವಂತೆ ಅವನನ್ನೆತ್ತಿ ಹತ್ತಿರದಲ್ಲಿದ್ದ ಮಾವಿನಮರಕ್ಕೆ ಸಾಗಿಸಿ, ಅವನ ತಲೆಗಿದ್ದ ರುಮಾಲು ಬಿಚ್ಚಿ ಅದರಿಂದಲೇ ಅವನನ್ನು ಗಿಡಕ್ಕೆ ಬಿಗಿದು ಕಟ್ಟಿದ. ಎಚ್ಚರವಾಗುವುದರೊಳಗಾಗಿಯೆ ಆ ಶಿಪಾಯಿ ಪೂರ್ಣವಾಗಿ ಬಂಧನಕ್ಕೊಳಗಾಗಿ ಬಿಟ್ಟಿದ್ದ. ಆತ ಬಾಯಿ ತೆರೆದು ಕೂಗಿಕೊಳ್ಳುವುದಾಗಲಿ, ಕೈಕಾಲುಗಳನ್ನು ಅಲುಗಾಡಿಸುವುದಾಗಲಿ ತೀರ ಅಸಾಧ್ಯವಾಗಿತ್ತು.

ಅವನ ಕೋಟಿನ ಜೇಬುಗಳೆಲ್ಲವನ್ನೂ ಹುಡುಕಿ ಚೆನ್ನಬಸಪ್ಪ ಅಲ್ಲಿದ್ದ ಗುಂಡುಗಳನ್ನೆಲ್ಲ ತೆಗೆದು ಸೊಂಟಕ್ಕೆ ಸಿಕ್ಕಿಸಿಕೊಂಡ. ಆ ಗುಡಿಸಿಲ

ಸೆರೆಮನೆಯ ಬೀಗದ ಕೈಯೂ ಅವನ ಜೇಬಿನಲ್ಲಿತ್ತು. ಅದನ್ನೂ ತೆಗೆದು ಕೊಂಡ. ಸುದೈವದಿಂದಲೊ ಏನೊ, ಒಂದು ಬೆಂಕಿಪೊಟ್ಟಣವೂ ಸಿಕ್ಕಿತು. ಅವನ್ನೂ ಎತ್ತಿಕೊಂಡ. ಆನಂತರ ಬಂದೂಕವನ್ನು ಎಡಗೈಯಲ್ಲಿ ಹಿಡಿದು ಕೊಂಡು ಅಡಿಗಳ ಸಪ್ಪಳಾಗದಂತೆ ನಡೆಯುತ್ತ ಗುಡಿಸಿಲಿಗೆ ಬಂದ.

ಬೀಗ ತೆರೆದು, ಬಾಗಿಲು ನೂಕಿ ಒಳಕ್ಕೆ ಬಂದು ಬಂದೂಕವನ್ನು ಮೂಲೆಯಲ್ಲಿರಿಸಿ ಬಾಗಿಲವನ್ನು ಭದ್ರವಾಗಿ ಮುಚ್ಚಿದ. ಕಡ್ಡಿಯೊಂದನ್ನು ಗೀಚಿ ಬೆಳಕು ಮಾಡಿ ಗುಡಿಸಿಲಿನಲ್ಲೆಲ್ಲ ದೃಷ್ಟಿ ಹೊರಳಿಸಿದ.

ಗೋರಿಗೆ ಹಾಕಲು ಸಿದ್ಧವಾಗಿ ಬಿದ್ದಿದ್ದ ಹೆಣದಂತೆ ಕಾಣುತ್ತಿದ್ದ ತನ್ನ ಪತ್ನಿಯ ನಗ್ನ ಶರೀರವನ್ನು ಅಸ್ಪಷ್ಟವಾಗಿ ತೋರಿಸಿತು ಆ ಕ್ಷೀಣ ಬೆಳಕು. ಹಲವಾರು ಕಡೆ ಉಂಟಾದ ಗಾಯಗಳಿಂದ, ಹೆಪ್ಪುಗಟ್ಟಿದ ರಕ್ತ ದಿಂದ, ಅಲ್ಲಲ್ಲಿ ಉಬ್ಬಿದ ಚರ್ಮದಿಂದ, ಅಲ್ಲಲ್ಲಿ ಬಿದ್ದ ತೂತುಗಳಿಂದ ವಿದ್ರೂಪವಾದ ಆ ಶರೀರ! ಅದು ತನ್ನ ಪ್ರೀತಿಯ ಪತ್ನಿಯದು! ಮದುವೆಯಾದ ಎಂಟು ವರ್ಷಗಳಿಂದ ತಾನು ಅತ್ಯಂತ ಅಕ್ಕರೆಯಿಂದ ಸಾಕಿ ಬೆಳೆಸಿದ ತನ್ನ ಪ್ರಾಣಪ್ರಿಯ ನಾಗುವಿನದು!

ಅವನ ಮೈಯೆಲ್ಲವೂ ನಡುಗತೊಡಗಿತು. ಎಂಥ ಹೃದಯಭೇದಕ ದೃಶ್ಯ ಅದು!

ಅವಳ ಹತ್ತಿರ ಕುಳಿತುಕೊಂಡು ಚೆನ್ನಬಸಪ್ಪ ಅವಳ ಕೆನ್ನೆಗಳನ್ನು ಮಮತೆಯಿಂದ ಸವರುತ್ತಾ ಪಿಸುದನಿಯಲ್ಲಿ ಕೂಗಿದ. 'ನಾಗೂ, ನನ್ನ ನಾಗೂ....'

ಶವದಂತೆ ನಿಶ್ಚಲವಾಗಿ ಬಿದ್ದುಕೊಂಡಿದ್ದ ಆ ಅಭಾಗಿನಿಗೆ ಎಚ್ಚರ ವಾಯಿತು. ಚಿರಪರಿಚಿತವಾದ ಆ ದನಿಯನ್ನಾಕೆ ಆಗಲೇ ಗುರುತಿಸಿ ದ್ದಳು. ತುಂಬಾ ಕಷ್ಟದಿಂದ ಕಣ್ಣು ತೆರೆದು ಗಂಡನ ಮುಖವನ್ನೊಮ್ಮೆ ನಿಟ್ಟಿಸಿ ನೋಡಿದಳು.

ಆತ ಕಡ್ಡಿಯ ಮೇಲೆ ಕಡ್ಡಿ ಗೀಚಿ ಬೆಳಕು ಮಾಡುತ್ತಲಿದ್ದ.

'ಬಂದಿರಾ? ಅಂತೂ ಬಂದಿರಾ ಒಮ್ಮೆ!' ಎಂದಳಾಕೆ ಅತ್ಯಂತ ಕ್ಷೀಣವಾದ ದನಿಯಲ್ಲಿ.

'ಅಯ್ಯೋ ನನ್ನ ನಾಗೂ, ಏನು ಗತಿ ಮಾಡಿದ್ದಾರಲ್ಲೇ ನಿನಗೆ?' ಎಂದು ಅಳುವ ದನಿಯಲ್ಲಿ ನುಡಿಯುತ್ತಾ ಚೆನ್ನಬಸಪ್ಪ ಅವಳನ್ನೆತ್ತಿ ತೊಡೆಯ ಮೇಲೆ ಮಲಗಿಸಿಕೊಂಡ.

ಒಂದು ಕ್ಷಣ ಪತಿಯ ತೊಡೆಯ ಮೇಲೊರಗಿದ್ದು ನಾಗಮ್ಮ ಸಮಾಧಾನದ ಉಸಿರು ಹಾಕಿದಳು. ಅನಂತರ ಮೆಲ್ಲಗಿನ ದನಿಯಲ್ಲಿ ಹೇಳಿದಳು.

'ನೀವೆಂದು ಬರ್ತೀರೋ ಅಂತ ಕಾಯ್ತಾ ಇದ್ದೆ. ನಿಮ್ಮ ತೊಡೀ ಮ್ಯಾಲೆ ಬಿದ್ದುಕೊಂಡು ಈ ಪ್ರಾಣ ಬಿಡಬೇಕು ಅಂತ ಜೀವ ಹಿಡಿದಿದ್ದೆ. ನೀವು ಬಂದಿರಿ....ಇನ್ನು ಆನಂದದಿಂದ ಪ್ರಾಣ ಬಿಡ್ತೀನಿ....ಆದರೆ.... ಆದರೆ....'

'ಆದರೇನು ನನ್ನ ಬಂಗಾರಾ...' ಎಂದ ಚೆನ್ನಬಸಪ್ಪ ಹುಚ್ಚನಂತೆ ಅವಳನ್ನು ಮುದ್ದಿಸುತ್ತ.

'ಆದರೆ...ಆದರೆ...ನೀವಿಲ್ಲಿಗೆ ಬರಬಾರದಾಗಿತ್ತು. ಇನ್ನು ಈ ಪಿಶಾಚಿಗಳು ನಿಮ್ಮನ್ನು ಬಿಡೋದಿಲ್ಲ. ನಿಮ್ಮನ್ನ ಹಿಡೀಬೇಕು ಅಂತಲೇ ಕಾಯ್ತಾ ಇದಾರೆ ಅವರು. ನಿಮ್ಮನ್ನ ಬಿಡೋದಿಲ್ಲರೀ ಅವರು...ಬಿಡೋದಿಲ್ಲ...ಫಾಸೀ ಹಾಕುವವರೆಗೂ ಬಿಡೋದಿಲ್ಲ...ಅಯ್ಯೋ, ನನಗಾಗಿ ನೀವು ಬಂದಿರೇನು? ನನಗಾಗಿ ನೀವು ಸಿಕ್ಕುತ್ತೀರಲ್ಲಾ ಅವರ ಕೈಯಲ್ಲಿ...' ಎನ್ನುತ್ತಾ ಆಕೆ ಉದ್ವೇಗದಿಂದ ಎದ್ದು ಕುಳಿತುಕೊಳ್ಳತೊಡಗಿದಳು. 'ನೀವಿಲ್ಲಿ ನಿಲ್ಲಬೇಡಿ. ಒಂದು ಗಳಿಗೇನೂ ನಿಲ್ಲಬೇಡಿ. ಅವರ ಕೈಗೆ ಸಿಕ್ಕಬೇಡಿ. ಇದೇ ನನ್ನ ಆಸೆ....' ಎಂದು ಹೇಳುತ್ತಿದ್ದ ಹಾಗೇ ಅವಳ ಶರೀರ ಹಠಾತ್ತಾಗಿ ಕೆಳಕ್ಕುರುಳಿತು.

ಅವಳ ದೇಹವನ್ನು ಎದೆಗೊತ್ತಿಕೊಳ್ಳುತ್ತಾ ಚೆನ್ನಬಸಪ್ಪ ಹುಚ್ಚನಂತೆ

'ಸಿಕ್ಕೋಲ್ಲ ಕಣೇ ನಾಗೂ, ನಾನು ಪೋಲೀಸರ ಕೈಗೆ ಸಿಕ್ಕೋಲ್ಲ. ನಿನಗ್ಯಾಕೆ ನನ್ನ ಚಿಂತೆ? ಅವರ ಕೈಗೆ ಸಿಕ್ಕುವದಕ್ಕಾಗಿ ಬಂದಿಲ್ಲ ನಾನು. ಅವರ ಕೈಯೊಳಗಿಂದ ನಿನ್ನ ಬಿಡಿಸಿಕೊಂಡು ಹೋಗುವದಕ್ಕಾಗಿ ಬಂದೀನಿ. ಏಳು ನನ್ನ ಚಿನ್ನಾ, ಒಂದು ಗಳಿಗೇನೂ ಇರೋದು ಬೇಡ ಇಲ್ಲಿ. ಈ ನರಕದಿಂದ ನಿನ್ನ ಕರೆದುಕೊಂಡು ಹೋಗ್ತೀನಿ. ಏಳು....'

ಏಳುವಂತಿರಲಿಲ್ಲ ನಾಗಪ್ಪ.

ಎಂಟು ದಿನಗಳ ಚಿತ್ರಹಿಂಸೆಯುಲ್ಲೂ ಸಹ ಹೇಗೋ ಆ ಶರೀರದಲ್ಲಿ ತಡೆದು ನಿಂತಿದ್ದ ಅವಳ ಜೀವ ಪತಿಯ ಅಂತ್ಯದರ್ಶನವಾಗುತ್ತಲೂ ಸಮಾಧಾನದಿಂದ ಹಾರಿಹೋಗಿತ್ತು.

ತಣ್ಣಗಾಗುತ್ತಿದ್ದ ಪತ್ನಿಯ ಕಳೇಬರವನ್ನು ಹಿಡಿದುಕೊಂಡು ಕ್ಷಣ ಕಾಲ ದಿಙ್ಮೂಢನಂತೆ ಕುಳಿತಿದ್ದ ಚಿನ್ನಬಸಪ್ಪ. ಅವನ ವೈಯಕ್ತಿಕ ಬಾಳಿನ ಆಸೆ, ಆಕಾಂಕ್ಷೆಗಳೆಲ್ಲವೂ ಅವಳೊಂದಿಗೇ ಸತ್ತುಹೋಗಿ ಆ ಶವ ದಲ್ಲಿ ಒಟ್ಟುಗೂಡಿದಂತಿತ್ತು. ಸಂಸಾರದ ಬಲೆಗೆ ಅವನನ್ನು ತೊಡಗಿಸಿದ್ದ ಒಂದೇ ಒಂದು ಮಾಯಾ ತಂತುವೂ ಈಗ ಹರಿದು ಹೋಗಿತ್ತು.

ಇನ್ನು ಆತ ಏಕಾಕಿ!

ಇನ್ನು ಆತ ನಿರಂಕುಶ!

ಇನ್ನು ಆತನನ್ನು ತಡೆಯುಬಲ್ಲ ಶಕ್ತಿ ಯಾವುದೂ ಇಲ್ಲ ಜಗತ್ತಿನಲ್ಲಿ!

ಒಂದೇ ಒಂದು ಉದ್ದೇಶದಿಂದ ಇನ್ನು ಆತ ಹೋರಾಡುವ. ಜೊತೆ ಗಾತಿಯನ್ನು ಕಳೆದುಕೊಂಡ ಹೆಬ್ಬುಲಿ ಸೇಡಿನ ಉರಿಯಿಂದ ಗರ್ಜಿಸುವಂತೆ ಆತ ಗರ್ಜಿಸುವ. ತನ್ನ ಪ್ರೀತಿಯ ಪತ್ನಿಯನ್ನೀರೀತಿ ಬಲಿ ತೆಗೆದು ಕೊಂಡ ಈ ಪೈಶಾಚಿಕ ಪೋಲೀಸ್ ರಾಜ್ಯದ ವಿರುದ್ಧ ಅವನು ಕೊನೆಯ ವರೆಗೂ ಯುದ್ಧ ಮಾಡುವವ.

ಸ್ಮಶಾನದಲ್ಲಿನ ಸೌದೆಯ ರಾಶಿಯು ಮೇಲೆ ಶವವನ್ನೊರಗಿಸುವಂತೆ ಗುಡಿಸಿಲಿನಲ್ಲಿನ ಹುಲ್ಲಿನ ಮೇಲೆ ಪತ್ನಿಯ ಕಳೇಬರವನ್ನೊರಗಿಸಿದ ಚಿನ್ನ ಬಸಪ್ಪ. ಅದನ್ನು ಹೊತ್ತುಕೊಂಡು ಹೋಗಿ ಮಣ್ಣಿನಲ್ಲಿ ಹೂಳುವುದೂ

ಅವನಿಗೆ ಇಷ್ಟವಿರಲಿಲ್ಲ. ಇಲ್ಲಿಯೇ ಸುಟ್ಟು ಬೂದಿಯಾಗಲಿ—ಪೋಲೀಸರ ಕೈಗೆ ಶವವೂ ಸಿಕ್ಕದಿರಲಿ—ಎಂದುಕೊಂಡು ಗುಡಿಸಿಲಿನ ಗೋಡೆಗಳಿಗಿದ್ದ ಹುಲ್ಲನ್ನು ಎಳೆದು ರಾಶಿ ಮಾಡಿ ಶವದ ಮೇಲಿಟ್ಟ. ಸಿದ್ಧತೆಯೆಲ್ಲ ಮುಗಿಯುತ್ತಲೂ ಕಡ್ಡಿ ಗೀಚಿ ಹುಲ್ಲಿಗೆ ಬೆಂಕಿಯಿಟ್ಟ. ಗುಡಿಸಿಲಿನ ಗೋಡೆಗಳಿಗೂ ಉರಿ ಹತ್ತಿಸಿದ. ಕೊಂಚಕಾಲ ನಿಂತಲ್ಲಿಯೆ ನಿಂತಿದ್ದು ಜ್ವಾಲೆಗಳನ್ನುಗುಳುತ್ತ ಹೊರಡುವ ಬೆಂಕಿಯನ್ನೆ ಶೂನ್ಯವಾಗಿ ನಿಟ್ಟಿಸುತ್ತಿದ್ದು ಅನಂತರ ಬಂದೂಕವನ್ನೆತ್ತಿಕೊಂಡು ಹೊರಗಣ ಕತ್ತಲೆಗೆ ಧುಮುಕಿ ಕ್ಷಣಾರ್ಧದಲ್ಲಿ ಮಾಯವಾದ.

ಗುಡಿಸಿಲು ಹತ್ತಿಕೊಂಡು ಧಗಧಗನೆ ಉರಿಯೆದ್ದಾಗ ಡೇರೆಗಳಲ್ಲಿ ಮಲಗಿದ್ದ ಪೋಲೀಸರಿಗೆ ಎಚ್ಚರವಾಯಿತು.

ಅನಾಹುತವಾಯಿತೆಂಬುದು ಗೊತ್ತಾಗುತ್ತಲೂ ಅವರು ಹೆದರಿ ಎದ್ದು ಬಂದೂಕಗಳನ್ನೆತ್ತಿಕೊಂಡು ಗುಂಡುಹಾರಿಸುತ್ತಲೇ ಧಾವಿಸಿ ಬಂದರು.

ನಾಗಮ್ಮನನ್ನು ಬಿಡಿಸಿಕೊಂಡು, ಗುಡಿಸಿಲಿಗೆ ಬೆಂಕಿಯಿಟ್ಟು ಹಳ್ಳಿಗರು ಓಡಿಹೋಗಿರುವರೆಂದೇ ಅವರು ಭಾವಿಸಿದರು. ಗಿಡದ ಬಂಧನಕ್ಕೆ ಸಿಲುಕಿ ಒದ್ದಾಡಿಕೊಳ್ಳುತ್ತಿದ್ದ ಕಾವಲಿನ ಶಿಪಾಯಿಯನ್ನೂ ಮರೆತು ಅವರು ಎಲ್ಲ ದಿಕ್ಕುಗಳಿಗೂ ಗುಂಡು ಹಾರಿಸುತ್ತ ಹುಚ್ಚುಹುಚ್ಚಾಗಿ ಓಡತೊಡಗಿದರು.

ಸೊಂಟದಲ್ಲಿದ್ದ ಗುಂಡುಗಳನ್ನು ಬಂದೂಕಿಗೆ ತುಂಬಿ ಸಿದ್ಧವಾಗಿಟ್ಟುಕೊಂಡು ಚೆನ್ನಬಸಪ್ಪ ಕತ್ತಲೆಯ ತೆರೆಯ ಹಿಂದೆ ಮಾಯವಾಗಿ ಬಿಟ್ಟಿದ್ದ. ಯಾರು ಹುಡುಕಿದರೂ ಇನ್ನು ಆತ ಸಿಕ್ಕಿ ಬೀಳುವವನಲ್ಲ.

ಕೊನೆಯವರೆಗೂ ಆತ ಅಜ್ಞಾತವಾಸಿ.

ಪೋಲೀಸರು ಮತ್ತು ಗೂಢಚಾರರ ಕಣ್ಣಿಗೆ ಮಂಕುಬೂದಿಯ

ರಚುತ್ತ ಹಳ್ಳಿ ಪಳ್ಳಿ ಸುತ್ತುತ್ತ ಆತ ಅಲೆಯುವನು. ಜನರನ್ನು ಹೋರಾಟಕ್ಕೆ ಸಿದ್ಧಗೊಳಿಸುವನು. ತನ್ನ ಹಳ್ಳಿಯನ್ನು ಸುಲಿದು ಸುಟ್ಟು ಸೂರೆಗೊಂಡ, ತನ್ನ ಪ್ರಿಯ ಪತ್ನಿಯನ್ನೂ ಆಕೆಯಂಥ ನೂರಾರು ಸಾಧ್ವಿಯರನ್ನೂ ಹಿಂಸಿಸಿ ಕೊಂದ ಘಾತಕಿಗಳನ್ನಾತ ಸದೆಬಡಿಯುವನು.

ಕೊನೆಯಿಲ್ಲ ಅವನ ಅಜ್ಞಾತವಾಸಕ್ಕೆ; ಕೊನೆಯಿಲ್ಲ ಅವನ ಹೋರಾಟಕ್ಕೆ:

ದಬ್ಬಾಳಿಕೆಯ ರಾಜ್ಯ ಸೋತು ಹಾಳಾಗುವವರೆಗೂ ಅದು ಸಾಗುವುದು; ಸ್ವಾತಂತ್ರ್ಯ ಬರುವವರೆಗೂ ಸಾಗುವುದು.

ಚೆನ್ನಬಸಪ್ಪನೆಂಬ ಒಬ್ಬ ವ್ಯಕ್ತಿಯ ನಿರ್ಧಾರ ಮಾತ್ರವಲ್ಲ ಅದು; ಇಡೀ ಭಾರತದ ನಿರ್ಧಾರ. ಎಂಥ ಸಂಕಟದಲ್ಲೂ ಜೀವಂತವಾಗಿರುವ ಗಂಡು ಭಾರತದ ನಿರ್ಧಾರ!

ಏಪ್ರಿಲ್ ೧೯೪೭

---

ಮುದ್ರಣ:—೧ ನೇ ಪುಟದಿಂದ ೫೬ ರಾಮಕೃಷ್ಣ ಅಂಡ್ ಕೋನಲ್ಲಿ
ಇನ್ನುಳಿದುದೆಲ್ಲವೂ ಲಲಿತಾ ಪ್ರಿಂಟಿಂಗ್ ವರ್ಕ್ಸ್‌ನಲ್ಲಿ.